# ನವಕರ್ನಾಟಕ ಪ್ರಕಾಶನ

# ಪುಸ್ತಕ ಪಟ್ಟಿ ಜನವರಿ ೨೦೨೨




## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್

# ಮಾಹಿತಿ

ಈ ಪುಸ್ತಕ ಪಟ್ಟಿಯಲ್ಲಿ ಆಯಾ ಪುಸ್ತಕದ ಮುಖಬೆಲೆಯನ್ನು ಶೀರ್ಷಿಕೆಯ ಮುಂದೆ ನಮೂದಿಸಲಾಗಿದೆ. ಯಾವುದೇ ಪುಸ್ತಕ ಮರುಮುದ್ರಣಗೊಂಡಾಗ ಈ ಬೆಲೆಯಲ್ಲಿ ವ್ಯತ್ಯಾಸ ಆಗಬಹುದು. ಪಟ್ಟಿಯಲ್ಲಿರುವ ಎಲ್ಲ **ನವಕರ್ನಾಟಕ ಪ್ರಕಟಣೆಗಳಿಗೆ** ಮುಖಬೆಲೆಯ ಮೇಲೆ **ಶೇಕಡ 10ರ ಸೋಡಿಯನ್ನು** ನೀಡಲಾಗುವುದು. ನಿಮ್ಮ ಅವಶ್ಯಕತೆಗಳಿಗಾಗಿ ನಮ್ಮ ಯಾವುದೇ ಪುಸ್ತಕ ಮಳಿಗೆಗೆ ಬನ್ನಿ. ಭಾರತದ ಯಾವುದೇ ಸ್ಥಳಕ್ಕೆ ಅಂಚೆ/ಕೊರಿಯರ್ ಮೂಲಕ ತರಿಸಿಕೊಳ್ಳುವಿರಾದಲ್ಲಿ ನಿವ್ವಳ ರೂ. 399ಕ್ಕಿಂತ ಕಡಿಮೆ ಮೊಬಲಗಿನ ಬೇಡಿಕೆಗಳಿಗೆ ಅಂಚೆ/ಕೊರಿಯರ್ ವೆಚ್ಚ ರೂ. 49 ಪ್ರತ್ಯೇಕ. ಅದಕ್ಕಿಂತ ಹೆಚ್ಚಿನ ಮೊಬಲಗಿನ ಬೇಡಿಕೆಗಳಿಗೆ ಅಂಚೆ/ಕೊರಿಯರ್ ವೆಚ್ಚ ನಾವೇ ಭರಿಸುತ್ತೇವೆ. ಹಣವನ್ನು ಎಂ.ಓ. ಅಥವಾ ಡಿ.ಡಿ. ಮೂಲಕ ಈ ಕೆಳಗೆ ತಿಳಿಸಿದ ನಮ್ಮ ಪ್ರಧಾನ ಕಚೇರಿಗೆ ಕಳಿಸಿ ಅಥವಾ ನಮ್ಮ CURRENT A/c No. 0788201010612; IFSC Code CNRB0000788 (ಕೆನರಾ ಬ್ಯಾಂಕ್, ಮಾಧವನಗರ ಶಾಖೆ, ಬೆಂಗಳೂರು) – ಇಲ್ಲಿಗೆ ಹಣವನ್ನು ಜಮಾ/ ವರ್ಗಾವಣೆ ಮಾಡಿ.

ಇಲ್ಲಿರುವ QR Code ಅನ್ನು ಸ್ಕ್ಯಾನ್ ಮಾಡಿಯೂ ಹಣ ಪಾವತಿಸಬಹುದು. ಪಾವತಿಯ ದಾಖಲೆ/ವಿವರಗಳನ್ನು ಹಾಗೂ ಪುಸ್ತಕಗಳ ಬೇಡಿಕೆಯನ್ನು ನಿಮ್ಮ ವಿಳಾಸ ಸಮೇತ ಮೊಬೈಲ್ ಸಂಖ್ಯೆ 9480686858ಗೆ ವಾಟ್ಸಪ್ ಮಾಡಿ.

09892013609

*Online ಮೂಲಕವೂ ಬೇಡಿಕೆ ಸಲ್ಲಿಸಬಹುದು :*

Shop Online www.navakarnataka.com


## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್

ಎಂಬೆಸಿ ಸೆಂಟರ್, 11, ಕ್ರೆಸೆಂಟ್ ರಸ್ತೆ , ಕುಮಾರ ಪಾರ್ಕ್ ಪೂರ್ವ, ಬೆಂಗಳೂರು–560 001

ದೂರವಾಣಿ : 080–22161900/22161901/22161913/22161914

Email (ಕಛೇರಿ) : navakarnataka@gmail.com (ಮಳಿಗೆ) : nkpsales@gmail.com


## ನಮ್ಮ ಪುಸ್ತಕ ಮಳಿಗೆಗಳು

### ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್

- ಕೆಂಪೇಗೌಡ ರಸ್ತೆ, ಬೆಂಗಳೂರು – 560 009 ✆ 080–22203106
- ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – 560 001 ✆ 080–22161914
- ಕೆ. ಎಸ್. ರಾವ್ ರಸ್ತೆ, ಮಂಗಳೂರು – 575 001 ✆ 0824–2441016
- ಶರಾವತಿ ಕಟ್ಟಡ, ಬಲ್ಮಠ, ಮಂಗಳೂರು – 575 001 ✆ 0824–2425161
- ಚಾಮರಾಜ ಜೋಡಿ ರಸ್ತೆ, ರಾಮಸ್ವಾಮಿ ವೃತ್ತ, ಮೈಸೂರು–570 024 ✆ 0821–2424094
- ಮಿನಿ ವಿಧಾನಸೌಧದ ಎದುರು, ಸ್ಟೇಷನ್ ರಸ್ತೆ, ಕಲಬುರಗಿ – 585102 ✆ 08472–224302


ಮುದ್ರಣ : ಶೋಭಾ ಪ್ರಿಂಟರ್ಸ್, ಬೆಂಗಳೂರು – 560 021

# ನವಕರ್ನಾಟಕ ಪ್ರಕಾಶನ

ಆರು ದಶಕಗಳಿಗೂ ಮೀರಿದ ಅಕ್ಷರ ಪಯಣ

# ಪುಸ್ತಕ ಪಟ್ಟಿ

**ಜನವರಿ ೨೦೨೨**

ನವಕರ್ನಾಟಕ ಪ್ರಕಾಶನ

# ಪುಸ್ತಕಗಳ ಮೂಲಕ ಮಾನವ ಕುಲದ ಸೇವೆ

ನವಕರ್ನಾಟಕ ಪ್ರಕಾಶನ ಕಳೆದ ಆರು ದಶಕಗಳೂ ಮೀರಿದಂತೆ ಪುಸ್ತಕಗಳ ಪ್ರಕಾಶನ–ಪ್ರದರ್ಶನ–ಮಾರಾಟ ಚಟುವಟಿಕೆ ಹಾಗೂ ಸಾಹಿತ್ಯಕ ಕಾರ್ಯಕ್ರಮಗಳ ಮೂಲಕ ಕರ್ನಾಟಕದಾದ್ಯಂತ ಪುಸ್ತಕ ಸಂಸ್ಕೃತಿಯನ್ನು ಬೆಳೆಸುವ ಪ್ರಾಮಾಣಿಕ ಪ್ರಯತ್ನವನ್ನು ಮಾಡುತ್ತ ಬಂದಿದೆ. 'ಪುಸ್ತಕಗಳ ಮೂಲಕ ಮಾನವ ಕುಲದ ಸೇವೆ' ಎಂಬುದೇ ಇದರ ಧ್ಯೇಯವಾಕ್ಯ.

ಈವರೆಗೆ ಸುಮಾರು 6000ಕ್ಕೂ ಹೆಚ್ಚು ಪ್ರಕಟಣೆಗಳನ್ನು ಹೊರತಂದಿರುವ ನವಕರ್ನಾಟಕ ಪ್ರಕಾಶನದ ಅನೇಕ ಶೀರ್ಷಿಕೆಗಳು ಹಲವಾರು ಮರುಮುದ್ರಣಗಳನ್ನು ಕಂಡಿರುವುದು ಅವುಗಳ ಜನಪ್ರಿಯತೆಗೆ ಸಾಕ್ಷಿ. ಜನಪರ ಸಾಹಿತ್ಯ ಪ್ರಸಾರದ ಮೂಲಕ ನಾಡಿನ ಬುದ್ಧಿಜೀವಿಗಳಿಂದ ಹಿಡಿದು ಶ್ರೀಸಾಮಾನ್ಯನವರೆಗೆ ಓದುಗರ ದೊಡ್ಡ ಬಳಗವನ್ನೇ ಈ ಸಂಸ್ಥೆ ಹೊಂದಿದೆ. ಪ್ರಕಾಶನ ಕ್ಷೇತ್ರದ ಹಲವು ಪ್ರತಿಷ್ಠಿತ ಪ್ರಶಸ್ತಿಗಳನ್ನು ಕೂಡ ತನ್ನದಾಗಿಸಿಕೊಂಡಿದೆ. ಬೆಂಗಳೂರು (2), ಮಂಗಳೂರು (2), ಮೈಸೂರು, ಕಲಬುರಗಿ ನಗರಗಳಲ್ಲಿ ಸುಸಜ್ಜಿತ ಖಾಯಂ ಮಳಿಗೆಗಳನ್ನು ಹೊಂದಿರುವುದಲ್ಲದೆ ವರ್ಷಂಪ್ರತಿ ರಾಜ್ಯಾದ್ಯಂತ ನೂರಾರು ಕಡೆ ಪುಸ್ತಕ ಪ್ರದರ್ಶನಗಳನ್ನು ನಡೆಸುತ್ತ ಓದುಗರಿರುವಲ್ಲಿಗೇ ಸದಭಿರುಚಿಯ ಪುಸ್ತಕಗಳನ್ನು ಒಯ್ಯುವುದು ನವಕರ್ನಾಟಕ ಪ್ರಕಾಶನದ ವೈಶಿಷ್ಟ್ಯವಾಗಿದೆ.

ಇದಲ್ಲದೆ, 2014ರಿಂದ ನವಕರ್ನಾಟಕ ಆನ್‌ಲೈನ್ ಮಳಿಗೆ www.navakarnataka.com ಕಾರ್ಯನಿರ್ವಹಿಸುತ್ತಿದೆ. ದೇಶದಾದ್ಯಂತ ಓದುಗರು ತಾವಿರುವಲ್ಲಿಗೇ ನೇರವಾಗಿ ವಿವಿಧ ಪ್ರಕಾಶಕರ ಪುಸ್ತಕಗಳನ್ನು ತರಿಸಿಕೊಳ್ಳಲು ಈ ವ್ಯವಸ್ಥೆ ಸಹಕಾರಿಯಾಗಿದೆ.

ನವಕರ್ನಾಟಕದ ವಿದ್ಯುನ್ಮಾನ ಪುಸ್ತಕ(eBook) 2015ರಿಂದ ಹಾಗೂ ಕೇಳು ಪುಸ್ತಕ (audio book)ಗಳು 2021ರಿಂದ ಲಭ್ಯವಾಗಿವೆ.

ತನ್ನ ಪ್ರಕಟಣೆಗಳ ಮೂಲಕ ಎಲ್ಲ ಪ್ರಗತಿಪರರೊಂದಿಗೆ, ಜನಪರ ಚಳುವಳಿಗಳೊಂದಿಗೆ ಗುರುತಿಸಿಕೊಂಡಿರುವ ನವಕರ್ನಾಟಕ ಪ್ರಕಾಶನ ಸಂಸ್ಥೆ ಕಳೆದ 23 ವರ್ಷಗಳಿಂದ ಪತ್ರಿಕಾರಂಗದಲ್ಲೂ ಸೇವೆ ಸಲ್ಲಿಸುತ್ತ ಬಂದಿದೆ. ಸಮಕಾಲೀನ ವಿಷಯಗಳಿಗೆ ಸ್ಪಂದಿಸುತ್ತ, ಓದುಗರನ್ನು ಚಿಂತನೆಗೆ ಪ್ರಚೋದಿಸುವ 'ಹೊಸತು' ತಿಂಗಳ ಪತ್ರಿಕೆ 'ನೆಮ್ಮದಿಯ ನಾಳೆ ನಮ್ಮದು' ಎಂಬ ಆಶಯದೊಂದಿಗೆ ಪ್ರಜ್ಞಾವಂತ ಓದುಗರ ಆತ್ಮೀಯ ಸಂಗಾತಿಯಾಗಿ ರೂಪುಗೊಂಡಿದೆ.

ನವಕರ್ನಾಟಕ ಪ್ರಕಾಶನದ ಚಟುವಟಿಕೆಗಳು ಸದಾ ಹೊಸ ಹೊಸ ಯೋಜನೆಗಳನ್ನು ಸಾಕಾರಗೊಳಿಸುವ ಆಶಯದಿಂದ ತುಂಬಿರುತ್ತವೆ. ಕನ್ನಡದ ಸಹೃದಯಿ ಓದುಗರು ನೀಡುತ್ತ ಬಂದಿರುವ ಪ್ರೋತ್ಸಾಹ, ಸಹಕಾರಗಳೇ ನವಕರ್ನಾಟಕದ ಚಟುವಟಿಕೆಗಳಿಗೆ ಚಿರಂತನ ಸ್ಫೂರ್ತಿ.

ನವಕರ್ನಾಟಕ ಪ್ರಕಾಶನದ ಲಭ್ಯವಿರುವ ಪುಸ್ತಕ, ಚಿತ್ರಪಟ ಮತ್ತು ಕೆಲವು ಏಜೆನ್ಸಿ ಪ್ರಕಟಣೆಗಳ ಪಟ್ಟಿಯೇ ಈ ಕಿರುಹೊತ್ತಿಗೆ. ನವಕರ್ನಾಟಕ ಸಂಸ್ಥೆ ವಿತರಿಸುತ್ತಿರುವ ವಿವಿಧ ಏಜೆನ್ಸಿ ಪುಸ್ತಕಗಳ ಪ್ರಕಾಶಕರ ಪಟ್ಟಿ ಪುಟ 71–72ರಲ್ಲಿದೆ. ಪುಸ್ತಕಗಳನ್ನು ತರಿಸಿಕೊಳ್ಳುವ ಬಗ್ಗೆ ಮಾಹಿತಿ, ನವಕರ್ನಾಟಕ ಪ್ರಕಾಶನದ ಮಳಿಗೆಗಳ ವಿಳಾಸ, ಇತ್ಯಾದಿ ವಿವರಗಳನ್ನು ಕೊನೆಯ ಪುಟದಲ್ಲಿ ನೀಡಲಾಗಿದೆ. ಹೆಚ್ಚಿನ ವಿವರಗಳಿಗೆ ದಯವಿಟ್ಟು ಸಂಪರ್ಕಿಸಿ :


**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**

**ಎಂಬೆಸಿ ಸೆಂಟರ್, 11, ಕ್ರೆಸೆಂಟ್ ರಸ್ತೆ , ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – 560 001**

ದೂರವಾಣಿ : (080) 22161900, 22161901, 22161902, 22161913, 22161914, 22872385

email (Office) : navakarnataka@gmail.com URL : www.navakarnataka.com

email (Sales) : nkpsales@gmail.com Blog : http//navakarnataka.blogspot.in

facebook.com/navakarnataka twitter.com/navakarnataka

# ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್

## ಒಂದು ಪರಿಚಯ

ಪ್ರಗತಿಶೀಲ ಸಾಹಿತ್ಯದ ಮುದ್ರಣ, ಪ್ರಕಾಶನ ಹಾಗೂ ಪ್ರಸಾರದ ಉದ್ದೇಶದಿಂದ ಸಮಾನಮನಸ್ಕ ಸಾಹಿತ್ಯಪ್ರಿಯರು, ಸಂಸ್ಕೃತಿ ಚಿಂತಕರು ಮತ್ತು ಸಾಮಾಜಿಕ ಕಾರ್ಯಕರ್ತರು ಸೇರಿ 1960ರಲ್ಲಿ ಬೆಂಗಳೂರಿನಲ್ಲಿ ಸ್ಥಾಪಿಸಿದ ಸಂಸ್ಥೆ **ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**. ಆ ದಿನಗಳಲ್ಲಿ ಪುಸ್ತಕ ಚಟುವಟಿಕೆಗಳ ಮುಖ್ಯ ಕೇಂದ್ರಗಳಾಗಿದ್ದ **ನ್ಯೂ ಸೆಂಚುರಿ ಬುಕ್ ಹೌಸ್** (ಬೆಂಗಳೂರು), **ಪ್ರಭಾತ್ ಬುಕ್ ಹೌಸ್** (ಮಂಗಳೂರು) ಮತ್ತು ಮುದ್ರಣ, ಪ್ರಕಾಶನ ಕ್ಷೇತ್ರಗಳಲ್ಲಿ ಸಕ್ರಿಯವಾಗಿ ತೊಡಗಿಸಿ ಕೊಂಡಿದ್ದ **ಜನಶಕ್ತಿ ಪ್ರಿಂಟರ್ಸ್** ಮತ್ತು **ಜನಶಕ್ತಿ ಪ್ರಕಾಶನ** (ಬೆಂಗಳೂರು) – ಈ ನಾಲ್ಕು ಸಂಸ್ಥೆಗಳು ಅದೇ ವರ್ಷ (1960) ನವಕರ್ನಾಟಕದೊಂದಿಗೆ ವಿಲೀನಗೊಂಡು ಅದನ್ನು ಬಲಪಡಿಸಿದವು. ಆರಂಭದಲ್ಲಿ ಶ್ರೀ ಬಿ. ವಿ. ಕಕ್ಕಿಲ್ಲಾಯ ಅಧ್ಯಕ್ಷರಾಗಿಯೂ, ಶ್ರೀ ಎಂ. ಎಸ್. ಕೃಷ್ಣನ್, ಶ್ರೀ ಸಿ. ಆರ್. ಕೃಷ್ಣರಾವ್ ಮುಂತಾದವರು ನಿರ್ದೇಶಕರಾಗಿಯೂ, ಶ್ರೀ ಎಸ್. ರಾಮಚಂದ್ರ ಭಟ್ ಕಾರ್ಯದರ್ಶಿಯಾಗಿಯೂ ಸಂಸ್ಥೆಯ ಜವಾಬ್ದಾರಿಯನ್ನು ಹೊತ್ತರು. 1974ರಲ್ಲಿ ಭಟ್ ಅವರು ನಿವೃತರಾದಾಗ ಆರಂಭದಿಂದಲೇ ಸಂಸ್ಥೆಯ ಜೊತೆಗಿದ್ದ ಶ್ರೀ ಆರ್. ಎಸ್. ರಾಜಾರಾಮ್ ಕಾರ್ಯದರ್ಶಿಯಾಗಿ ನಂತರ ಅವರೇ ವ್ಯವಸ್ಥಾಪಕ ನಿರ್ದೇಶಕರಾಗಿ ಸಂಸ್ಥೆಯನ್ನು ಮುನ್ನಡೆಸಿದರಲ್ಲದೆ ಕನ್ನಡ ಪುಸ್ತಕಲೋಕದಲ್ಲಿ ಸಂಚಲನ ಮೂಡಿಸಿದರು. ಪ್ರಕಟಣೆಗಳಲ್ಲಿ ವೈವಿಧ್ಯ ಮತ್ತು ವೈಶಿಷ್ಟ್ಯ, ಪ್ರಚಾರ ಮತ್ತು ಪ್ರಸಾರದಲ್ಲಿ ವಿನೂತನ ಪ್ರಯೋಗಗಳು ಹಾಗೂ ಕನ್ನಡ ಪುಸ್ತಕ ಸಂಸ್ಕೃತಿಗೆ ನೀಡಿದ ಅಮೂಲ್ಯ ಕೊಡುಗೆಗಳು ಅವರಿಗೆ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಯನ್ನು ತಂದುಕೊಟ್ಟಿತು (2018). 1976ರಲ್ಲಿ ನೇಮಕಗೊಂಡ ಶ್ರೀ ಎ. ರಮೇಶ ಉಡುಪ 2016ರಿಂದ ಕಾರ್ಯನಿರ್ವಾಹಕ ನಿರ್ದೇಶಕರಾಗಿಯೂ, 2009ರಿಂದ ನಿರ್ದೇಶಕರಾಗಿರುವ ಡಾ॥ ಸಿದ್ದನಗೌಡ ಪಾಟೀಲ 2016ರಿಂದ ವ್ಯವಸ್ಥಾಪಕ ನಿರ್ದೇಶಕರಾಗಿಯೂ ಸಂಸ್ಥೆಯನ್ನು ಮುನ್ನಡೆಸುತ್ತಿದ್ದಾರೆ.

ಬೆಂಗಳೂರಿನ ಕೆಂಪೇಗೌಡ ವೃತ್ತದಲ್ಲಿ ಕಾರ್ಯಾರಂಭ ಮಾಡಿದ ನವಕರ್ನಾಟಕ ಪ್ರಕಾಶನವು ಪ್ರಗತಿಪಥದಲ್ಲಿ ಸಾಗುತ್ತ 1987ರಲ್ಲಿ ತನ್ನ ಪ್ರಧಾನ ಕಛೇರಿಯನ್ನು ಈಗಿನ ಹೊಸ ಕಟ್ಟಡಕ್ಕೆ ಸ್ಥಳಾಂತರಿಸಿತು. ಇದೇ ಕಟ್ಟಡದಲ್ಲಿ ಪುಸ್ತಕಗಳ ಸಗಟು ಮಾರಾಟಕ್ಕೆ ಪ್ರತ್ಯೇಕ ಮಳಿಗೆಯನ್ನು ತೆರೆಯಲಾಯಿತು. ಆ ವೇಳೆಗಾಗಲೇ ಪುಸ್ತಕಗಳ ದಾಸ್ತಾನಿಗಾಗಿ ಬೆಂಗಳೂರಿನ ಪೀಣ್ಯದಲ್ಲಿ ಗೋದಾಮನ್ನು ಕೂಡ ಕಟ್ಟಲಾಗಿತ್ತು (1984). ಅದೇ ಆವರಣದಲ್ಲಿ ಹೊಸ ಸುಸಜ್ಜಿತ ಮುದ್ರಣಾಲಯವನ್ನು ಸ್ಥಾಪಿಸಲಾಯಿತು (1991). ಮೈಸೂರು (1989) ಮತ್ತು ಕಲಬುರಗಿ (1991) ನಗರಗಳಲ್ಲಿ ಹೊಸದಾಗಿ ಪುಸ್ತಕ ಮಳಿಗೆಗಳನ್ನು ತೆರೆಯಲಾಯಿತು. ಬೆಂಗಳೂರಿನ ಕೆಂಪೇಗೌಡ ವೃತ್ತದಲ್ಲಿ ಇದ್ದ ಪುಸ್ತಕ ಮಳಿಗೆಯನ್ನು ಗಾಂಧಿನಗರ 5ನೇ ಮುಖ್ಯರಸ್ತೆಗೆ ಸ್ಥಳಾಂತರಿಸಲಾಯಿತು (2002). 2007ರಲ್ಲಿ ಮೈಸೂರಿನ ಪುಸ್ತಕ ಮಳಿಗೆಯನ್ನು ವಿಸ್ತರಿಸಿ ನವೀಕರಣಗೊಳಿಸಲಾಯಿತು. 2010ರಲ್ಲಿ ಮಂಗಳೂರಿನ ಕೆ. ಎಸ್. ರಾವ್ ರಸ್ತೆಯಲ್ಲಿದ್ದ ಪುಸ್ತಕ ಮಳಿಗೆಯನ್ನೂ ವಿಸ್ತರಿಸಿ ನವೀಕರಣಗೊಳಿಸಲಾಯಿತು. ಮಂಗಳೂರಿನ ಎರಡನೇ ಪುಸ್ತಕ ಮಳಿಗೆಯನ್ನು ಬಲ್ಮಠ ಮುಖ್ಯರಸ್ತೆಯಲ್ಲಿ 2012ರಲ್ಲಿ ತೆರೆಯಲಾಯಿತು. ಬೆಂಗಳೂರಿನ ಕೆಂಪೇಗೌಡ ರಸ್ತೆಯಲ್ಲಿ ಹೊಸ ಪುಸ್ತಕ ಮಳಿಗೆಯೊಂದನ್ನು 2016ರಲ್ಲಿ ತೆರೆಯಲಾಯಿತು. (ಅನಿವಾರ್ಯ ಕಾರಣಗಳಿಂದಾಗಿ ಪೀಣ್ಯದ ಮುದ್ರಣಾಲಯವನ್ನು 2016ರಲ್ಲಿ ಹಾಗೂ ಗಾಂಧಿನಗರದ ಮಳಿಗೆಯನ್ನು 2018ರಲ್ಲಿ ಮುಚ್ಚಬೇಕಾಗಿ ಬಂತು.) ಪುಸ್ತಕ ಪ್ರದರ್ಶನಗಳನ್ನು ಏರ್ಪಡಿಸುವುದರ ಮೂಲಕ ರಾಜ್ಯದ ಮೂಲೆಮೂಲೆಗಳಿಗೆ ಸದಭಿರುಚಿಯ ಓದನ್ನು ಪ್ರಸರಿಸುತ್ತ ಬಂದಿರುವ ನವಕರ್ನಾಟಕ ವರ್ಷಪೂರ್ತಿ ಪುಸ್ತಕಯಾತ್ರೆಯಲ್ಲಿ ತೊಡಗಿಕೊಂಡಿದೆ. ತನ್ನದೇ ಆದ ಸಂಪಾದಕ ಮಂಡಳಿ, ಪುಸ್ತಕ ಹಾಗೂ ಪತ್ರಿಕಾ ವಿಭಾಗ, ಗಣಕೀಕೃತ ಅಕ್ಷರ ಜೋಡಣೆ ಮತ್ತು ವಿನ್ಯಾಸ ಸೌಲಭ್ಯ, ಪುಸ್ತಕ ಮಳಿಗೆಗಳ ಹಾಗೂ ಪ್ರದರ್ಶನ ತಂಡಗಳ ಮೂಲಕ ರಾಜ್ಯಾದ್ಯಂತ ಅತ್ಯುತ್ತಮ ಮಾರಾಟ ಜಾಲ ಇವೆಲ್ಲವನ್ನೂ ಹೊಂದಿರುವ ಕರ್ನಾಟಕದ ಏಕೈಕ

ಪೂರ್ಣಪ್ರಮಾಣದ ಸುಸಜ್ಜಿತ ಪ್ರಕಾಶನ ಸಂಸ್ಥೆಯಾಗಿ ನವಕರ್ನಾಟಕ ಈಗ ಬೆಳೆದುನಿಂತಿದೆ.

2014ರಲ್ಲಿ ಆರಂಭವಾದ ನವಕರ್ನಾಟಕದ ಆನ್‌ಲೈನ್ ಮಳಿಗೆ www.navakarnataka.com ಈಗಾಗಲೇ ಜನಪ್ರಿಯವಾಗಿದೆ. ದೇಶದಾದ್ಯಂತ ಓದುಗರು ತಾವಿರುವಲ್ಲಿಗೇ ನೇರವಾಗಿ ವಿವಿಧ ಪ್ರಕಾಶಕರ ಪುಸ್ತಕಗಳನ್ನು ತರಿಸಿಕೊಳ್ಳಲು ಈ ವ್ಯವಸ್ಥೆ ಸಹಕಾರಿಯಾಗಿದೆ.

ನವಕರ್ನಾಟಕದ ವಿದ್ಯುನ್ಮಾನ ಪುಸ್ತಕ(eBook)ಗಳು 2015ರಿಂದಲೂ ಕೇಳು ಪುಸ್ತಕ (Audio book)ಗಳು 2021ರಿಂದಲೂ ಲಭ್ಯವಾಗಿವೆ.

ನವಕರ್ನಾಟಕ ಪ್ರಕಾಶನ ಸಂಸ್ಥೆ ಕಳೆದ ಸುಮಾರು ಆರು ದಶಕಗಳಿಗೂ ಮೀರಿದಂತೆ ಪುಸ್ತಕಗಳ ಪ್ರಕಾಶನ – ಪ್ರದರ್ಶನ – ಮಾರಾಟ ಚಟುವಟಿಕೆ ಹಾಗೂ ವಾಚನಾಭಿವೃದ್ಧಿಯ ವಿವಿಧ ಕಾರ್ಯಕ್ರಮಗಳನ್ನು ಏರ್ಪಡಿಸುವ ಮೂಲಕ ಕನ್ನಡದಲ್ಲಿ ಪುಸ್ತಕ ಸಂಸ್ಕೃತಿಯನ್ನು ಬೆಳೆಸುವ ಪ್ರಾಮಾಣಿಕ ಪ್ರಯತ್ನವನ್ನು ಮಾಡುತ್ತ ಬಂದಿದೆ. **ಪುಸ್ತಕಗಳ ಮೂಲಕ ಮಾನವ ಕುಲದ ಸೇವೆ** ಎಂಬುದೇ ಇದರ ಧ್ಯೇಯವಾಕ್ಯ.

ಈವರೆಗೆ ಸುಮಾರು 6000ಕ್ಕೂ ಹೆಚ್ಚು ಪ್ರಕಟಣೆಗಳನ್ನು (2035 ಶೀರ್ಷಿಕೆಗಳು + 3970 ಮರುಮುದ್ರಣಗಳು) ಹೊರತಂದಿರುವ ನವಕರ್ನಾಟಕ ಪ್ರಕಾಶನದ ಅನೇಕ ಶೀರ್ಷಿಕೆಗಳು ಹಲವಾರು ಮರುಮುದ್ರಣಗಳನ್ನು ಕಂಡಿರುವುದು ಅವುಗಳ ಜನಪ್ರಿಯತೆಗೆ ಸಾಕ್ಷಿ. ಜನಪರ ಸಾಹಿತ್ಯ ಪ್ರಸಾರದ ಮೂಲಕ ನಾಡಿನ ಬುದ್ಧಿಜೀವಿಗಳಿಂದ ಹಿಡಿದು ಜನಸಾಮಾನ್ಯರವರೆಗೆ ಓದುಗರ ದೊಡ್ಡ ಬಳಗವನ್ನೇ ಈ ಸಂಸ್ಥೆ ಹೊಂದಿದೆ. ಪ್ರಕಾಶನ ಕ್ಷೇತ್ರದ ಹಲವು ಪ್ರತಿಷ್ಠಿತ ಪ್ರಶಸ್ತಿಗಳನ್ನು ಕೂಡ ತನ್ನದಾಗಿಸಿಕೊಂಡಿದೆ.

**ಕನ್ನಡ ಪುಸ್ತಕ ಸಂಸ್ಕೃತಿಯನ್ನು ಹರಡಲು ಗಣನೀಯ ಸೇವೆ ಸಲ್ಲಿಸಿರುವುದನ್ನು ಗುರುತಿಸಿ ಕರ್ನಾಟಕ ಸರ್ಕಾರದ ಕನ್ನಡ ಪುಸ್ತಕ ಪ್ರಾಧಿಕಾರವು ನವಕರ್ನಾಟಕ ಪ್ರಕಾಶನ ಸಂಸ್ಥೆಗೆ 2006ರ 'ಅತ್ಯುತ್ತಮ ಪ್ರಕಾಶನ ಸಂಸ್ಥೆ' ಪ್ರಶಸ್ತಿ ನೀಡಿ ಗೌರವಿಸಿದೆ.**

**ಭಾರತೀಯ ಪ್ರಕಾಶಕರ ಮತ್ತು ಪುಸ್ತಕ ಮಾರಾಟಗಾರರ ಸಂಘಗಳ ಒಕ್ಕೂಟ (FPBAI, New Delhi)ವು 2008ರಲ್ಲಿ 'ಅತ್ಯುತ್ತಮ ಪ್ರಾದೇಶಿಕ ಪ್ರಕಾಶನ ಸಂಸ್ಥೆ' ಪ್ರಶಸ್ತಿ ನೀಡಿ ಪುರಸ್ಕರಿಸಿದೆ.**

**ಕನ್ನಡ ಸಾಹಿತ್ಯ ಪರಿಷತ್ತು 2010ರ 'ಅತ್ಯುತ್ತಮ ಪ್ರಕಾಶಕ – ಅಂಕಿತ ಪುಸ್ತಕ – ಪುರಸ್ಕಾರ'ವನ್ನು ನವಕರ್ನಾಟಕ ಪ್ರಕಾಶನ ಸಂಸ್ಥೆಗೆ ನೀಡಿ ಸನ್ಮಾನಿಸಿದೆ.**

**ನವಕರ್ನಾಟಕ ಪ್ರಕಾಶನದ ಮೂಲಕ ಕನ್ನಡ ಪುಸ್ತಕ ಸಂಸ್ಕೃತಿಗೆ ಶ್ರೀ ಆರ್. ಎಸ್. ರಾಜಾರಾಮ್ ಅವರು ನೀಡಿದ ಅಮೂಲ್ಯ ಕೊಡುಗೆಗಳನ್ನು ಪರಿಗಣಿಸಿ ಕರ್ನಾಟಕ ಸರ್ಕಾರವು ಅವರಿಗೆ 2018ರ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ.**

**ಇವಲ್ಲದೆ, ತನ್ನ ನೂರಾರು ಕೃತಿಗಳಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಪುಸ್ತಕ ಪ್ರಾಧಿಕಾರ, ಕನ್ನಡ ಸಾಹಿತ್ಯ ಪರಿಷತ್ತು , ಕುವೆಂಪು ಭಾಷಾ ಭಾರತಿ, ಕರ್ನಾಟಕ ವಿಜ್ಞಾನ ಮತ್ತು ತಂತ್ರಜ್ಞಾನ ಅಕಾಡೆಮಿ, ಕನ್ನಡ ವೈದ್ಯಸಾಹಿತ್ಯ ಪರಿಷತ್ತು , ಡಾ|| ಪಿ. ಎಸ್. ಶಂಕರ ಪ್ರತಿಷ್ಠಾನ, ಕರ್ನಾಟಕ ಸಂಘ (ಶಿವಮೊಗ್ಗ), ಭಾರತೀಯ ಪ್ರಕಾಶಕರ ಒಕ್ಕೂಟ, ಕರ್ನಾಟಕ ಲೇಖಕಿಯರ ಸಂಘ, ಬಿ.ಎಂ.ಶ್ರೀ. ಪ್ರತಿಷ್ಠಾನ, ಶಿವರಾಮ ಕಾರಂತ ಪ್ರತಿಷ್ಠಾನ, ವರ್ಧಮಾನ, ಉಗ್ರಾಣ, ಅಕ್ಕ, ಬಸವರಾಜ ಕಟ್ಟೀಮನಿ ಪ್ರತಿಷ್ಠಾನ, ನಾಡೋಜ ಡಾ|| ಬರಗೂರು ಪ್ರತಿಷ್ಠಾನ ಮುಂತಾದ ಪ್ರತಿಷ್ಠಿತ ಪ್ರಶಸ್ತಿಗಳನ್ನು ಪಡೆದ ಹೆಗ್ಗಳಿಕೆ ನವಕರ್ನಾಟಕ ಪ್ರಕಾಶನದ್ದಾಗಿದೆ.**

ವಿವಿಧ ವಿಷಯಗಳ ಕುರಿತು ಕನ್ನಡ ಪುಸ್ತಕಗಳನ್ನು ಮಾತ್ರವಲ್ಲದೆ, ಇಂಗ್ಲಿಷ್ ಹಾಗೂ ಹಿಂದಿ ಪುಸ್ತಕಗಳನ್ನು, ಕನ್ನಡ ಹಾಗೂ ಇಂಗ್ಲಿಷ್ ಚಿತ್ರಪಟಗಳನ್ನು ನವಕರ್ನಾಟಕ ಪ್ರಕಟಿಸಿದೆ. ಓದುಗರೊಂದಿಗೆ ಹಲವು ದಶಕಗಳಿಂದಲೂ ಆತ್ಮೀಯ ಒಡನಾಟವನ್ನು ಬೆಳೆಸಿಕೊಂಡು ಬಂದಿರುವ ಈ ಸಂಸ್ಥೆಯ ಪ್ರಕಟಣಾ ವೈವಿಧ್ಯ ಒಂದು ಅಭೂತಪೂರ್ವ ಸಾಧನೆ.

ಕಥೆ, ಕಾದಂಬರಿ, ಕವನ, ಆತ್ಮಕಥೆ, ನಾಟಕ–ರಂಗಭೂಮಿ, ವಿಮರ್ಶೆ, ಪ್ರವಾಸ, ಚಿತ್ರಕಲೆ, ಶಿಕ್ಷಣ, ಸಂಶೋಧನೆ, ಪರಾಮರ್ಶನ, ಪದಕೋಶ, ವ್ಯಾಕರಣ, ಗಣಿತ, ವಿಜ್ಞಾನ, ಜನಪ್ರಿಯ ವಿಜ್ಞಾನ, ಪರಿಸರ – ವನ್ಯಜೀವಿ ಸಂರಕ್ಷಣೆ, ತಂತ್ರಜ್ಞಾನ, ಇಂದ್ರಜಾಲ, ವಿಚಾರ ಸಾಹಿತ್ಯ, ತತ್ವಶಾಸ್ತ್ರ, ಜೀವನ ಚರಿತ್ರೆ, ಸಾಮಾಜಿಕ – ರಾಜಕೀಯ, ಕಾನೂನು, ಸಮಾಜ ವಿಜ್ಞಾನ, ಇತಿಹಾಸ, ವ್ಯಕ್ತಿತ್ವ ವಿಕಾಸ, ಆರೋಗ್ಯ–

ವೈದ್ಯಕೀಯ, ಮನೋವಿಜ್ಞಾನ, ಯೋಗ, ಅಡುಗೆ, ಕೃಷಿ, ಸಾಮಾನ್ಯ ಜ್ಞಾನ ಇತ್ಯಾದಿ ವಿಷಯಗಳ ಪುಸ್ತಕಗಳೇ ಅಲ್ಲದೆ **ನೋಡಿ–ಕಲಿ, ಪುಟಾಣಿ ಪುಸ್ತಕ ಮಾಲೆ, ನವಕರ್ನಾಟಕ ಕಿರಿಯರ ಕಥಾಮಾಲೆ, ಮಕ್ಕಳ ಜನಪದ ಕಥಾಮಾಲೆ, ಕನ್ನಡ ಕಲಿಕೆ, ಅಕ್ಷರ ಕಿರಣ, ನೋಡುತ್ತ ಆಡುತ್ತ ಕಲಿಯೋಣ ಬಾ, ಚಿತ್ರಕಲಾ ಮಾಲಿಕೆ, ವಿಶ್ವಮಾನ್ಯರು, ಲೋಕಜ್ಞಾನ ಮಾಲೆ, ಗಣಿತ ಸಂವತ್ಸರ ಮಾಲಿಕೆ, ಜ್ಞಾನ–ವಿಜ್ಞಾನ ಮಾಲೆ, ವಿಜ್ಞಾನ – ಸರಳ ಪರಿಚಯ, ಪುಟ್ಟ–ಕಿಟ್ಟ ವಿಜ್ಞಾನ ಸಂವಾದ, ಬಳಕೆಯಂತ್ರ ಕೈಪಿಡಿ, ತೋಟದಿಂದ ತಾಟಿಗೆ, ವ್ಯಕ್ತಿ ವಿಕಸನ ಮಾಲೆ, ಕನ್ನಡ ಕಲಿಕೆ ಮಾಲಿಕೆ, ಗ್ರಾಹಕ ಜಾಗೃತಿ ಮಾಲಿಕೆ, ಕ್ರಾಂತಿ ಕಿಡಿಗಳು, ಹೊಸತು ವಾಚಿಕೆ, ನವಕರ್ನಾಟಕ ಸಾಹಿತ್ಯ ಸಂಪದ, ವನಿತಾ ಚಿಂತನ ಮಾಲೆ, ವಿಶ್ವಕಥಾಕೋಶ, ಮಾರ್ಕ್ಸ್ 200 – ಕ್ಯಾಪಿಟಲ್ 150, ಏಂಗೆಲ್ಸ್ 200, ಲೋಕ ತತ್ತ್ವಶಾಸ್ತ್ರ ಪ್ರವೇಶಿಕೆ, Global Philosophy for Everyman, Citizen's Guide, Law in Everyday Life** ಮತ್ತು **Welcome to English** ಮುಂತಾದ ಮಾಲಿಕೆಗಳಡಿ ವಿವಿಧ ವಿಷಯಗಳಿಗೆ ಸಂಬಂಧಿಸಿದ ಹಲವಾರು ಪುಸ್ತಕಗಳನ್ನು ಪ್ರಕಟಿಸಿದೆ ಹಾಗೂ ಮುಂದೆಯೂ ಪ್ರಕಟಿಸಲಿದೆ.

ದೇಶವಿದೇಶಗಳ ಬೇರೆ ಬೇರೆ ಭಾಷೆಗಳ ಕಥಾ ಸಾಹಿತ್ಯ, ವಿಜ್ಞಾನ, ತತ್ವಶಾಸ್ತ್ರ ಹಾಗೂ ವಿಚಾರ ಸಾಹಿತ್ಯದ ಕೃತಿಗಳನ್ನು ಕನ್ನಡಿಗರಿಗೆ ಒದಗಿಸುತ್ತಿದೆ. ರಾಹುಲ ಸಾಂಕೃತ್ಯಾಯನ, ಭೀಷ್ಮ ಸಾಹನಿ, ಧರ್ಮಾನಂದ ಕೊಸಾಂಬಿ, ಎಸ್. ಜಿ. ಸರ್ದೇಸಾಯಿ, ದೇವಿಪ್ರಸಾದ ಚಟ್ಟೋಪಾಧ್ಯಾಯ, ಭಗವತ್ ಶರಣ ಉಪಾಧ್ಯಾಯ, ಆರ್. ಎಸ್. ಶರ್ಮಾ, ಇರ್ಫಾನ್ ಹಬೀಬ್, ಬಿಪಿನ್ ಚಂದ್ರ, ಕುಲದೀಪ್ ನಯ್ಯರ್, ರಸ್ಕಿನ್ ಬಾಂಡ್, ನರೇಂದ್ರ ದಾಭೋಲ್ಕರ್, ಶರಣಕುಮಾರ್ ಲಿಂಬಾಳೆ, ಎಂ. ಟಿ. ವಾಸುದೇವನ್ ನಾಯರ್, ಮಹಾಶ್ವೇತಾದೇವಿ, ಅಬ್ರಹಾಂ ಕೋವೂರ್, ಕಾರ್ಲ್ ಮಾರ್ಕ್ಸ್, ಮಕ್ಸೀಂ ಗಾರ್ಕಿ, ಲೆವ್ ಟಾಲ್‌ಸ್ಟಾಯ್ ಮುಂತಾದವರ ಕೃತಿಗಳನ್ನು ಕನ್ನಡದಲ್ಲಿ ಪ್ರಕಟಿಸಿದೆ. ಹಿಂದಿ, ಬಂಗಾಳಿ, ಮರಾಠಿ, ತೆಲುಗು, ತಮಿಳು, ಮಲೆಯಾಳಂ, ಇಂಗ್ಲಿಷ್, ರಷ್ಯನ್ ಭಾಷೆಗಳಿಂದ ಕನ್ನಡಕ್ಕೆ ಒಳ್ಳೆಯ ಓದನ್ನು ಒದಗಿಸಿರುವ ನವಕರ್ನಾಟಕ ಪ್ರಕಾಶನ ಅತಿ ಹೆಚ್ಚು ಪ್ರಮಾಣದಲ್ಲಿ ಕನ್ನಡ ಭಾಷಾಂತರಗಳನ್ನು ಪ್ರಕಟಿಸಿದ ಖಾಸಗಿ ಪ್ರಕಾಶನ ಸಂಸ್ಥೆ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ.

ಯಾವ ವಿಷಯವೇ ಆದರೂ ಅತ್ಯುತ್ತಮವಾದುದನ್ನು ಓದುಗರಿಗೆ ನೀಡಬೇಕು ಎಂಬ ಕಾಳಜಿ ಇರುವ ನವಕರ್ನಾಟಕ ಕಿರಿಯರನ್ನೂ ಮರೆತಿಲ್ಲ. **ಮಕ್ಕಳಿಗೆ ನಿನ್ನೆಯ ಕಥೆಗಳು, ನಾಳೆಯ ಕಥೆಗಳು, ನವಕರ್ನಾಟಕ ಕಿರಿಯರ ಕಥಾಮಾಲೆ, ಮಕ್ಕಳ ಜನಪದ ಕಥಾಮಾಲೆ, ಇನ್ಫಿನಿಟಿ – ನವಕರ್ನಾಟಕ ಪಂಚತಂತ್ರದ ಕಥೆಗಳು, ವಿಶ್ವಮಾನ್ಯರು** ಇತ್ಯಾದಿ ಮಾಲೆಗಳಲ್ಲಿ ಹಲವಾರು ಸಚಿತ್ರ ಪುಸ್ತಕಗಳನ್ನು, ಹಾಗೆಯೇ ಮಕ್ಕಳ ನಾಟಕಗಳು, ಪದ್ಯ ಸಂಕಲನಗಳನ್ನೂ, ಚಟುವಟಿಕೆ ಪುಸ್ತಕಗಳನ್ನೂ ಪ್ರಕಟಿಸಿದೆ.

ಅಲ್ಲದೆ, ಚಿಣ್ಣರಿಗಾಗಿ **ನವಕರ್ನಾಟಕ ಚಿತ್ರ ಖಜಾನೆ (Navakarnataka Picture Treasure)** ಮಾಲೆಯಲ್ಲಿ ಹಲವು ವರ್ಣರಂಜಿತ ಚಿತ್ರಪಟಗಳನ್ನು ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಪ್ರಕಟಿಸುತ್ತಿದೆ.

ಸಾಹಿತ್ಯ ಅಕಾಡೆಮಿ, ಜ್ಞಾನಪೀಠ, ಪಂಪ ಇವೇ ಮುಂತಾದ ಪ್ರತಿಷ್ಠಿತ ಪ್ರಶಸ್ತಿ ವಿಜೇತ ಹಾಗೂ ಇತರ ಹಿರಿಯ, ಹೆಸರಾಂತ ಕನ್ನಡ ಸಾಹಿತಿಗಳ ಭಾವಚಿತ್ರಗಳನ್ನು ಕೂಡ ನವಕರ್ನಾಟಕ ಪ್ರಕಟಿಸಿದೆ.

ನವಸಾಕ್ಷರರಿಗಾಗಿ **ಅಕ್ಷರ ಕಿರಣ** ಮಾಲಿಕೆಯಲ್ಲಿ ಸರಳ ನಿರೂಪಣೆಯ ನೂರಾರು ಸಚಿತ್ರ ಪುಸ್ತಕಗಳನ್ನು ನವಕರ್ನಾಟಕ ಪ್ರಕಾಶನ ಹೊರತಂದಿದ್ದು, ರಾಜ್ಯದಲ್ಲಿ ಈವರೆಗೆ ನವಸಾಕ್ಷರರಿಗಾಗಿ ರಚಿಸಲಾದ ಪುಸ್ತಕಗಳಲ್ಲೇ ಇವು ಅತ್ಯುತ್ತಮವೆಂದು ತಜ್ಞರಿಂದ ಶ್ಲಾಘಿಸಲ್ಪಟ್ಟಿವೆ.

ಒಳ್ಳೆಯ ಓದನ್ನು ಒದಗಿಸುವ ಧ್ಯೇಯ ಹೊತ್ತ ಈ ಸಂಸ್ಥೆ ತನ್ನ ಪ್ರಕಟಣೆಗಳಲ್ಲದೆ, National Book Trust (NBT), ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು ಹಾಗೂ ಭಾರತದ ಹಲವು ಖಾಸಗಿ ಪ್ರಕಾಶನದ ಸಂಸ್ಥೆಗಳ ಅಧಿಕೃತ ವಿತರಕರಾಗಿದ್ದು ಅವರ ಪ್ರಕಟಣೆಗಳನ್ನು ಮಾರುಕಟ್ಟೆಗೆ ಒದಗಿಸುತ್ತಿದೆ. World Health Organisation (WHO), Council for Scientific and Industrial Research (CSIR), National Institute for Advanced Studies (NIAS), Bangalore Association for Science Education (BASE), Azim Premji University

ಮುಂತಾದವರ ಸಹಯೋಗದೊಂದಿಗೆ ಹಲವು ಉಪಯುಕ್ತ ಪುಸ್ತಕಗಳನ್ನು ಕನ್ನಡದಲ್ಲಿ ಪ್ರಕಟಿಸಿದೆ.

ಮಾಸ್ಕೋದ ರಾದುಗ, ಪ್ರಗತಿ ಮತ್ತು ಮಿರ್ ಪ್ರಕಾಶನ ಸಂಸ್ಥೆಗಳ ಸಹಯೋಗದೊಂದಿಗೆ ಜನಪ್ರಿಯ ವಿಜ್ಞಾನ, ಮಕ್ಕಳ ಸಾಹಿತ್ಯ, ಕಾದಂಬರಿ ಹಾಗೂ ಸಾಹಿತ್ಯೇತರ ಕೃತಿಗಳನ್ನು ನವಕರ್ನಾಟಕ ಕನ್ನಡದಲ್ಲಿ ಪ್ರಕಟಿಸಿದೆ. ಮಾಸ್ಕೋದ ರಾದುಗ ಪ್ರಕಾಶನ ಹಾಗೂ ನವಕರ್ನಾಟಕ ಜಂಟಿಯಾಗಿ ಹೊರತಂದ **ಮುದ್ದು ಕನ್ನಡ** ಕನ್ನಡದ ಮೊದಲ ಕಲಿಕೆಯ ಅತ್ಯುತ್ತಮ ಪುಸ್ತಕವೆಂದು ಮನ್ನಣೆಗೆ ಪಾತ್ರವಾಗಿದೆ. ಇದಲ್ಲದೆ, ಆಗಿನ ಸೋವಿಯತ್ ಒಕ್ಕೂಟದಿಂದ ಪ್ರಕಟವಾಗುತ್ತಿದ್ದ ಸುಲಭ ಬೆಲೆಯ ಉತ್ತಮ ಗುಣಮಟ್ಟದ ಪುಸ್ತಕಗಳು, ನಿಯತಕಾಲಿಕಗಳು, ಧ್ವನಿಸುರುಳಿಗಳು, ಅಂಚೆಚೀಟಿಗಳು ಇವೇ ಮುಂತಾದ ಜ್ಞಾನವಾಹಕಗಳನ್ನು ಆಸಕ್ತರಿಗೆ ಒದಗಿಸಿದ ಸಂಸ್ಥೆ ನವಕರ್ನಾಟಕ.

ಇಂಗ್ಲಿಷಿನಲ್ಲಿಯೂ ಹಲವಾರು ಪುಸ್ತಕಗಳನ್ನು ಪ್ರಕಟಿಸಿದೆ. **Global Philosophy for Everyman** (Gen. Ed. : Debiprasad Chattopadhyaya), **Milestones in Science and Technology** (Comp. : K. Gopinath), **God - A Creation of Man** (A. N. Moorthy Rao), **A Window on the Wall - 'Quit India' Prison Diary of a 19-Year-Old** (H. Y. Sharada Prasad), **Nanoworld** (C. N. R. Rao), **You Too Can Learn the Art of Counselling** (C. R. Chandrashekar), **Pickles from Home : The Worlds of a Bilingual** (Sugata Srinivasaraju), ಮುಂತಾದವು ಮಹತ್ವದ ಕೃತಿಗಳು.

1962ರಲ್ಲಿ ಖ್ಯಾತ ರಷ್ಯನ್ ಕಾದಂಬರಿಕಾರ ನಿಕೊಲಾಯಿ ಆಸ್ಟ್ರೋವ್‌ಸ್ಕಿ ಅವರ **ಅಗ್ನಿದೀಕ್ಷೆ,** 1975ರಲ್ಲಿ ನಿರಂಜನರ ಪ್ರಸಿದ್ಧ ಕಾದಂಬರಿ **ಚಿರಸ್ಮರಣೆ,** 1978ರಲ್ಲಿ ರಾಹುಲ ಸಾಂಕೃತ್ಯಾಯನರ ಜಗದ್ವಿಖ್ಯಾತ ಕೃತಿ **ವೋಲ್ಗಾ–ಗಂಗಾ** ಇವಲ್ಲದೆ, ಸಮಾಜವಾದಿ ಚಿಂತನೆಯ ಅನೇಕ ಕಿರುಹೊತ್ತಗೆಗಳ ಪ್ರಕಟಣೆ ನವಕರ್ನಾಟಕದ ಆರಂಭದ ದಶಕಗಳ ಸಾಧನೆ.

1980–82ರಲ್ಲಿ ನಿರಂಜನರ ಪ್ರಧಾನ ಸಂಪಾದಕತ್ವದಲ್ಲಿ **ವಿಶ್ವ ಕಥಾ ಕೋಶ** ಎಂಬ ಬೃಹತ್ ಯೋಜನೆಯನ್ನು ಯಶಸ್ವಿಯಾಗಿ ಕಾರ್ಯಗತಗೊಳಿಸಿದೆ. ಜಗತ್ತಿನ ನೂರಾರು ದೇಶಗಳ, ಹಲವಾರು ಭಾಷೆಗಳ, 324 ಕಥೆಗಳನ್ನು ಕನ್ನಡದ ವಿವಿಧ ಲೇಖಕರಿಂದ ಅನುವಾದಿಸಿ, ಇಪ್ಪತ್ತೈದು ಸಂಪುಟಗಳಲ್ಲಿ ಪ್ರಕಟಿಸಿದೆ. ಸಾಹಿತ್ಯಾಸಕ್ತರಿಂದ, ವಿಮರ್ಶಕರಿಂದ ಪ್ರಶಂಸಿಸಲ್ಪಟ್ಟ ಈ ಸಂಪುಟಗಳ ವಿಮರ್ಶೆಯ ಗಾತ್ರವೇ ಮುನ್ನೂರು ಪುಟಗಳಿಗೆ ಮೀರಿದೆ. ಭಾರತೀಯ ಭಾಷೆಗಳಲ್ಲೇ ಇಂಥ ಯೋಜನೆ ಇದೇ ಮೊದಲು.

1985–86ರಲ್ಲಿ ಸಂಸ್ಥೆಯ ಇಪ್ಪತ್ತೈದನೇ ವಾರ್ಷಿಕೋತ್ಸವ ಸಂದರ್ಭದಲ್ಲಿ ನವಕರ್ನಾಟಕ **ನಾಲೆಜ್ ಬ್ಯಾಂಕ್** ಮತ್ತು **ಬುಕ್ ಬಾಂಡ್** ಯೋಜನೆಗಳನ್ನು ಬಳಕೆಗೆ ತಂದುದರಿಂದ ಪುಸ್ತಕ ಮಾರಾಟ ವಿಸ್ತರಣೆಗೆ ಬಹಳ ಸಹಾಯಕವಾಯಿತು. ಅದೇ ವರ್ಷ 'ಬೆಳ್ಳಿ–ಬೆಳಕು' ಎಂಬ ಅಂಕಿತದೊಂದಿಗೆ ಹಲವು ಉತ್ಕೃಷ್ಟ ಪ್ರಕಟಣೆಗಳನ್ನೂ ಹೊರತರಲಾಯಿತು.

ಸಂಸ್ಥೆಯ ಸ್ಥಾಪಕ ನಿರ್ದೇಶಕರಲ್ಲೊಬ್ಬರಾಗಿದ್ದ ಶ್ರೀ ಬಿ. ವಿ. ಕಕ್ಕಿಲ್ಲಾಯ ಅವರು **ಮಾರ್ಕ್ಸ್‌ವಾದಿ ವಿಚಾರಧಾರೆ** ಮಾಲಿಕೆಯಲ್ಲಿ ರಚಿಸಿದ **ಕಾರ್ಲ್ ಮಾರ್ಕ್ಸ್ : ಬದುಕು–ಬರೆಹ** ಮತ್ತು **ಫ್ರೆಡರಿಕ್ ಎಂಗೆಲ್ಸ್ : ಜೀವನ ಚಿಂತನ** ಕೃತಿಗಳು 1985–86ರಲ್ಲಿ ಪ್ರಕಟಗೊಂಡವು. ಅವುಗಳು ಕ್ರಮವಾಗಿ 'ಸೋವಿಯತ್ ಲ್ಯಾಂಡ್ ನೆಹರೂ ಪುರಸ್ಕಾರ' ಮತ್ತು 'ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ'ಗಳಿಗೆ ಪಾತ್ರವಾದವು. ಕಕ್ಕಿಲ್ಲಾಯ ಅವರ ಸಂಪಾದಕತ್ವದಲ್ಲಿ **ಕ್ರಾಂತಿ ಕಿಡಿಗಳು** ಮಾಲಿಕೆಯಡಿ ಭಾರತದ ಇತಿಹಾಸದಿಂದ ಆಯ್ದ ಕ್ರಾಂತಿಕಾರಿ ಘಟನೆಗಳ ಬಗ್ಗೆ ಹಾಗೂ ಕ್ರಾಂತಿಕಾರಿ ವ್ಯಕ್ತಿಗಳ ಬಗ್ಗೆ ಕಿರು ಪರಿಚಯ ನೀಡುವ 20 ಪುಸ್ತಿಕೆಗಳನ್ನು 1986–87ರಲ್ಲಿ ಪ್ರಕಟಿಸಲಾಯಿತು. ಇವೆಲ್ಲವೂ 'ಬೆಳ್ಳಿ–ಬೆಳಕು' ಪ್ರಕಟಣೆಗಳು.

'ಬೆಳ್ಳಿ–ಬೆಳಕು' ಅಂಕಿತದೊಂದಿಗೆ 1986ರಲ್ಲಿ ಪ್ರಕಟವಾದ ಇನ್ನೊಂದು ಪ್ರಮುಖ ಕೃತಿ ಡಾ॥ ಸಿ. ವೀರಣ್ಣ ಅವರ **ಕನ್ನಡ ಸಾಹಿತ್ಯ. ಚಾರಿತ್ರಿಕ ಬೆಳವಣಿಗೆ : ಸಂಪುಟ–1**. ಇದು ಪ್ರಾಚೀನ ಕನ್ನಡ ಸಾಹಿತ್ಯ ಕುರಿತಾದ ವಿಶ್ಲೇಷಣಾತ್ಮಕ ಕೃತಿ. ಇದರ ಮುಂದುವರಿದ ಭಾಗ, ಮಧ್ಯಕಾಲೀನ ಸಾಹಿತ್ಯದ ಕುರಿತಾದ 'ಸಂಪುಟ–2' 2011ರಲ್ಲಿ ಪ್ರಕಟವಾಯಿತು.

1986ರಿಂದಲೇ ಆರೋಗ್ಯ–ವೈದ್ಯಕೀಯ ಪುಸ್ತಕಗಳಿಗೆ ವಿಶೇಷ ಗಮನ ಹರಿಸಿದುದರಿಂದ ಖ್ಯಾತ ವೈದ್ಯಸಾಹಿತಿಗಳ ಹಲವಾರು ಉಪಯುಕ್ತ ಕೃತಿಗಳು ಬೆಳಕಿಗೆ ಬಂದವು. ಮುಖ್ಯವಾಗಿ, ಡಾ॥ ಸಿ. ಆರ್. ಚಂದ್ರಶೇಖರ್ ರಚಿಸಿರುವ, ಅನುವಾದಿಸಿರುವ ಹಾಗೂ ಸಂಪಾದಿಸಿರುವ ನೂರಕ್ಕೂ ಹೆಚ್ಚು ಕೃತಿಗಳು ನವಕರ್ನಾಟಕದಿಂದ ಪ್ರಕಟಗೊಂಡು, ಆರೋಗ್ಯದ ಬಗ್ಗೆ ಅರಿವು ಮೂಡಿಸುವಲ್ಲಿ ಸಹಕಾರಿಯಾದವು.

ದೇವಿಪ್ರಸಾದ ಚಟ್ಟೋಪಾಧ್ಯಾಯರ ಪ್ರಧಾನ ಸಂಪಾದಕತ್ವದಲ್ಲಿ **Global Philosophy for Everyman** ಮಾಲಿಕೆಯ 8 ಸಂಪುಟಗಳು 1990–91ರಲ್ಲಿ ಪ್ರಕಟವಾದವು.

1993ರಲ್ಲಿ ಕರ್ನಾಟಕ ಸರ್ಕಾರದ ಪಠ್ಯಪುಸ್ತಕ **ಕನ್ನಡ ಭಾರತಿ – 9,** 1994ರಲ್ಲಿ ಪ್ರೌಢಶಾಲೆಯ 8, 9, 10ನೇ ತರಗತಿಗಳಿಗೆ ಕನ್ನಡ ಪ್ರಥಮ ಭಾಷೆಯ ಪುಸ್ತಕಗಳು ಹಾಗೂ ತಮಿಳು, ತೆಲುಗು, ಸಂಸ್ಕೃತ ಭಾಷೆಗಳೂ ಸೇರಿದಂತೆ ಒಟ್ಟು ಎಂಟು ಪಠ್ಯಪುಸ್ತಕಗಳನ್ನು ನವಕರ್ನಾಟಕ ಪ್ರಕಟಿಸಿತು.

1996ರಲ್ಲಿ ಕರ್ನಾಟಕ ಏಕೀಕರಣದ ನಲವತ್ತನೇ ವರ್ಷದ ಕೊಡುಗೆಯಾಗಿ ಡಾ॥ ಎಚ್. ಎಸ್. ಗೋಪಾಲ ರಾವ್ ಸಂಪಾದಿಸಿ ನಿರೂಪಿಸಿರುವ **ಕರ್ನಾಟಕ ಏಕೀಕರಣ ಇತಿಹಾಸ** ಪ್ರಕಟವಾಯಿತು. ಇದರ ಜೊತೆಗೆ ಪ್ರೊ॥ ಜಿ. ವೆಂಕಟಸುಬ್ಬಯ್ಯನವರು ರಚಿಸಿರುವ **ಇಗೋ ಕನ್ನಡ – 1** (ಸಾಮಾಜಿಕ ನಿಘಂಟು) ಸಹ ಪ್ರಕಟವಾಗಿದೆ. ಇದರ ಮುಂದುವರಿದ ಭಾಗ **ಇಗೋ ಕನ್ನಡ – 2** 2001ರಲ್ಲೂ, **ಇಗೋ ಕನ್ನಡ – 3** 2009ರಲ್ಲೂ ಪ್ರಕಟವಾಗಿವೆ.

ಡಾ॥ ಜಿ. ರಾಮಕೃಷ್ಣ ಅವರ ಪ್ರಧಾನ ಸಂಪಾದಕತ್ವದಲ್ಲಿ **ಸ್ವಾತಂತ್ರ್ಯೋತ್ತರ ಭಾರತ ಅವಲೋಕನ 1947–1997** ಮಾಲಿಕೆಯಲ್ಲಿ ವಿವಿಧ ಲೇಖಕರು ಬರೆದಿರುವ 14 ಸಂಪುಟಗಳು 1997–98ರಲ್ಲಿ ಬಿಡುಗಡೆಯಾಗಿವೆ. ಈ ಮಾಲಿಕೆಯ ಕೆಲವು ಕೃತಿಗಳು ಇಂಗ್ಲಿಷ್‌ನಲ್ಲೂ ಪ್ರಕಟಗೊಂಡಿವೆ.

ಪ್ರೊ॥ ಎಂ. ಎ. ಸೇತುರಾವ್ ಮತ್ತು ಶ್ರೀ ಕೆ. ಎಲ್. ಗೋಪಾಲಕೃಷ್ಣ ರಾವ್ ಸಂಪಾದಕತ್ವದಲ್ಲಿ ಡಿಮ್ಮೆ ¼ ಗಾತ್ರದ ಬಹುವರ್ಣದ 740 ಪುಟಗಳ **ನವಕರ್ನಾಟಕ ಜ್ಞಾನ–ವಿಜ್ಞಾನ ಕೋಶ** ಎಂಬ ನಾಲ್ಕು ಸಚಿತ್ರ ಸಂಪುಟಗಳು 1998ರಲ್ಲಿ ಪ್ರಕಟವಾಗಿವೆ. ಮೊದಲ ಮುದ್ರಣ (5,000 ಪ್ರತಿಗಳು) ಪ್ರಕಟವಾದ ಒಂದು ವರ್ಷದೊಳಗಾಗಿ ಓದುಗರ ಪ್ರೋತ್ಸಾಹದಿಂದ ಎರಡನೇ ಮುದ್ರಣ ಕಂಡಿರುವುದು ಈ ಸಂಪುಟಗಳ ಸಫಲತೆಯ ದ್ಯೋತಕವಾಗಿದೆ. ಅಂತರರಾಷ್ಟ್ರೀಯ ಮಟ್ಟದ ಮುದ್ರಣ ವಿನ್ಯಾಸ ಹೊಂದಿರುವ ಈ ಕೃತಿಗೆ ಹಲವಾರು ಪ್ರಶಸ್ತಿ, ಪುರಸ್ಕಾರಗಳು ದೊರೆತಿವೆ.

ಪುಸ್ತಕ ಪ್ರಕಟಣೆಯ ಜೊತೆಗೆ ನವಕರ್ನಾಟಕ **ಹೊಸತು** ಎಂಬ ತಿಂಗಳ ಪತ್ರಿಕೆಯನ್ನು 1999 ಆಗಸ್ಟ್ ತಿಂಗಳಿಂದ ಪ್ರಕಟಿಸುತ್ತಿದೆ. ಸಮಕಾಲೀನ ವಿಷಯಗಳಿಗೆ ಸ್ಪಂದಿಸುತ್ತ, ಓದುಗರನ್ನು ಚಿಂತನೆಗೆ ಪ್ರಚೋದಿಸುವ ಈ ಪತ್ರಿಕೆ **ನೆಮ್ಮದಿಯ ನಾಳೆ ನಮ್ಮದು** ಎಂಬ ಆಶಯದೊಂದಿಗೆ ಪ್ರಜ್ಞಾವಂತ ಓದುಗರು ಆತ್ಮೀಯತೆಯಿಂದ ಬರಮಾಡಿಕೊಳ್ಳುವ ಮಾಧ್ಯಮವಾಗಿ ರೂಪುಗೊಂಡಿದೆ. ಇದು ಸಾಕಷ್ಟು ಓದುಗರ ಹಾಗೂ ಲೇಖಕರ ಬಳಗವನ್ನೂ ರೂಪಿಸಿಕೊಂಡು ಯಶಸ್ವಿಯಾಗಿ ಮುನ್ನಡೆಯುತ್ತಿದೆ. ಪ್ರಾರಂಭ ದಿಂದಲೂ ಪತ್ರಿಕೆಯ ಸಂಪಾದಕರಾಗಿದ್ದ ಡಾ॥ ಜಿ. ರಾಮಕೃಷ್ಣ ಅವರು ಈಗ ಇದರ ಗೌರವ ಸಂಪಾದಕರು. 2012ರ ಮೇ ಸಂಚಿಕೆಯಿಂದ ಡಾ॥ ಸಿದ್ದನಗೌಡ ಪಾಟೀಲ ಅವರು ಸಂಪಾದಕರಾಗಿದ್ದಾರೆ.

**ನವಕರ್ನಾಟಕ ಸಾಹಿತ್ಯ ಸಂಪದ** ಮಾಲಿಕೆಯಲ್ಲಿ, ಕೇಂದ್ರ ಸಾಹಿತ್ಯ ಅಕಾಡೆಮಿ ಪುರಸ್ಕೃತರಾದ ಕನ್ನಡ ಲೇಖಕರ ಬದುಕು–ಬರೆಹ ಕುರಿತ ಪುಸ್ತಕಗಳು ಪ್ರಕಟವಾಗುತ್ತಿವೆ. 2001ರಲ್ಲಿ ಮೊದಲ ಕಂತಿನ 12 ಪುಸ್ತಕಗಳು ಬಿಡುಗಡೆಯಾದವು. ನಂತರ 2002 (12 ಪುಸ್ತಕಗಳು), 2006 (12 ಪುಸ್ತಕಗಳು), 2009 (8 ಪುಸ್ತಕಗಳು), 2012 (8 ಪುಸ್ತಕಗಳು), 2015 (3 ಪುಸ್ತಕಗಳು), 2017 (3 ಪುಸ್ತಕಗಳು) ಮತ್ತು 2020 (2 ಪುಸ್ತಕಗಳು) – ಈ ವರ್ಷಗಳಲ್ಲಿ ಹೊರಬಂದಿವೆ. ಡಾ॥ ಪ್ರಧಾನ್ ಗುರುದತ್ತ ಈ ಮಾಲಿಕೆಯ ಸಂಪಾದಕರು. ಮೊದಲ ಕಂತಿನ ಪುಸ್ತಕಗಳಿಗೆ ಡಾ॥ ಹಾ. ಮಾ. ನಾಯಕ ಅವರೂ ಸಂಪಾದಕರಾಗಿದ್ದರು.

ಭಾರತ ಸ್ವಾತಂತ್ರ್ಯ ಸಂಗ್ರಾಮ ಕುರಿತ ಮಹಾನ್ ಕೃತಿ ಶ್ರೀ ಕೋ. ಚೆನ್ನಬಸಪ್ಪ ಅವರ **ಬೇಡಿ ಕಳಚಿತು ದೇಶ ಒಡೆಯಿತು**. ಈ ರೋಮಾಂಚಕಾರಿ ಬೃಹತ್ ಕಾದಂಬರಿ 2001ರಲ್ಲಿ ಪ್ರಕಟವಾಗಿದೆ.

**ವಿಜ್ಞಾನ ಪದವಿವರಣ ಕೋಶ**ದ ಪ್ರಕಟಣೆ ನವಕರ್ನಾಟಕದ ಹೆಮ್ಮೆಯ ಯೋಜನೆಗಳಲ್ಲೊಂದು. 2001ರಲ್ಲಿ ಪ್ರಕಟವಾದ ಈ ಕೃತಿಯ ಪ್ರಧಾನ ಸಂಪಾದಕರು ಶ್ರೀ ಜಿ. ಟಿ. ನಾರಾಯಣರಾವ್. ವಿಜ್ಞಾನ ಲೇಖಕರಿಗೆ, ಶಿಕ್ಷಕರಿಗೆ ಹಾಗೂ ಸಂವಹನಕಾರರಿಗೆ ಇದೊಂದು ಅತ್ಯುಪಯುಕ್ತ ಕೈಪಿಡಿ.

ನವಕರ್ನಾಟಕ ಪ್ರಕಾಶನದ ಮತ್ತೊಂದು ವೈಶಿಷ್ಟ್ಯವೆಂದರೆ ಪುಸ್ತಕ ಪ್ರದರ್ಶನಗಳ ಮೂಲಕ ಓದುಗರಲ್ಲಿಗೇ ಪುಸ್ತಕಗಳನ್ನು ಒಯ್ಯುವುದು. ಕಳೆದ ಆರು ದಶಕಗಳಿಂದಲೂ ಪುಸ್ತಕ ಪ್ರದರ್ಶನಗಳ ಮೂಲಕ ಪುಸ್ತಕ ಸಂಸ್ಕೃತಿಯನ್ನು ಬೆಳೆಸುವ ಕಾಯಕದಲ್ಲಿ ನಿರಂತರ ತೊಡಗಿಕೊಂಡಿರುವ ಸಂಸ್ಥೆಯೆಂದರೆ ನವಕರ್ನಾಟಕವೊಂದೇ. ಹಾಗಾಗಿ, ನವಕರ್ನಾಟಕ ಸಂಸ್ಥೆ ಓದುಗರ ಪ್ರಕಾಶನವಾಗಿ ಗುರುತಿಸಲ್ಪಟ್ಟಿದೆ.

ಕಾಲೇಜು ವಿದ್ಯಾರ್ಥಿಗಳಲ್ಲಿ ಆರೋಗ್ಯ–ವೈದ್ಯಕೀಯ ಪುಸ್ತಕಗಳ ಓದಿನ ಆಸಕ್ತಿ ಬೆಳೆಸುವ ಉದ್ದೇಶದಿಂದ ಕನ್ನಡ ವೈದ್ಯ ಸಾಹಿತ್ಯ ಪರಿಷತ್ತಿನ ಸಹಯೋಗದೊಂದಿಗೆ ಬೆಂಗಳೂರಿನ ಹಲವು ಕಾಲೇಜುಗಳಲ್ಲಿ ಕನ್ನಡದ ಆರೋಗ್ಯ–ವೈದ್ಯಕೀಯ ಪುಸ್ತಕಗಳ ವಿಮರ್ಶಾ ಸ್ಪರ್ಧೆ ಏರ್ಪಡಿದೆ.

ಓದುಗರಿರುವಲ್ಲಿಗೆ ಪುಸ್ತಕ ಒಯ್ಯುವ ಚಟುವಟಿಕೆಯ ಮುಂದುವರಿಕೆಯಾಗಿ 2003ರಿಂದ 2005ರವರೆಗೆ ನವಕರ್ನಾಟಕ ಪ್ರಕಾಶನ ಹಾಗೂ ಕನ್ನಡ ವೈದ್ಯ ಸಾಹಿತ್ಯ ಪರಿಷತ್ತಿನ ಬೆಂಗಳೂರು ಶಾಖೆ ಜಂಟಿಯಾಗಿ, ಆಸ್ಪತ್ರೆಯಿಂದ ಆಸ್ಪತ್ರೆಗೆ **ವೈದ್ಯ ಸಾಹಿತ್ಯ ಪ್ರಚಾರ ಆಂದೋಲನ** ಕಾರ್ಯಕ್ರಮ ಏರ್ಪಡಿಸಿದ್ದವು. 2015ರಲ್ಲಿ ಪುನಃ ಇಂತಹದೇ ಕಾರ್ಯಕ್ರಮವನ್ನು ರಾಜೀವಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯದ ಸಹಯೋಗದೊಂದಿಗೆ ಬೆಂಗಳೂರಿನ ಹಲವು ಆಸ್ಪತ್ರೆಗಳಲ್ಲಿ **ಆರೋಗ್ಯ ವಿಜ್ಞಾನಗಳ ಪುಸ್ತಕ ಮೇಳ** ಹೆಸರಲ್ಲಿ ಏರ್ಪಡಿಸಲಾಯಿತು.

ಅಲ್ಲದೆ, ರಾಜ್ಯದ ಹಲವು ಶಾಲಾ ಗ್ರಂಥಾಲಯಗಳಿಗೆ ಮತ್ತು ಸಾರ್ವಜನಿಕ ಗ್ರಂಥಾಲಯಗಳಿಗೆ ನವಕರ್ನಾಟಕ ಪ್ರಕಾಶನವು ಪುಸ್ತಕಗಳ ಉಡುಗೊರೆ ನೀಡಿ ವಿದ್ಯಾರ್ಥಿಗಳ ಮತ್ತು ಓದುಗರ ಅರಿವನ್ನು ವಿಸ್ತರಿಸಲು ಸಹಾಯಕವಾಗಿದೆ.

ಪ್ರೌಢಶಾಲಾ ವಿದ್ಯಾರ್ಥಿಗಳಲ್ಲಿ ವಿಜ್ಞಾನ ವಿಷಯಗಳ ಆಸಕ್ತಿಯನ್ನು ಹೆಚ್ಚಿಸುವ ಪ್ರಯತ್ನವಾಗಿ ಬೆಂಗಳೂರಿನ ವಿಶ್ವೇಶ್ವರಯ್ಯ ವಸ್ತು ಸಂಗ್ರಹಾಲಯ ಹಾಗೂ ತುಮಕೂರು ವಿಜ್ಞಾನ ಕೇಂದ್ರದ ಸಹಯೋಗದೊಂದಿಗೆ ವಿಮರ್ಶಾ ಸ್ಪರ್ಧೆ ಏರ್ಪಡಿಸಿ ವಿದ್ಯಾರ್ಥಿಗಳಿಗೆ ಪುಸ್ತಕ ರೂಪದ ಬಹುಮಾನ ನೀಡುವ ಯೋಜನೆ, ಆಕಾಶವಾಣಿಯಲ್ಲಿ **ನವಕರ್ನಾಟಕ ಸಂಪುಟ** ಕಾರ್ಯಕ್ರಮ ಕೇಳಿ, ವಿಮರ್ಶೆ ಬರೆಯುವವರಿಗಾಗಿ ಬಹುಮಾನ ಯೋಜನೆ ಮುಂತಾದ ಕಾರ್ಯಕ್ರಮಗಳು ಯಶಸ್ವಿಯಾಗಿ ನೆರವೇರಿವೆ. ದೂರದರ್ಶನದ **ಥಟ್ ಅಂತ ಹೇಳಿ** ಕಾರ್ಯಕ್ರಮ ಪ್ರಾರಂಭವಾದ ವರ್ಷಪೂರ್ತಿ 2002ರಲ್ಲಿ (ಮತ್ತು ಪುನಃ 2012–13ರಲ್ಲಿ, 2015–16ರಲ್ಲಿ ಹಾಗೂ 2017–18ರಲ್ಲಿ) ಹಾಗೂ 'ಈ–ಟಿವಿ'ಯ **ಚೂಟಿ ಚುರುಕು** ಕ್ವಿಜ್ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಗೆದ್ದವರಿಗೆ ಪುಸ್ತಕ ಉಡುಗೊರೆ ನೀಡುವ ಮೂಲಕವೂ ಜ್ಞಾನ ಪ್ರಸಾರಕ್ಕೆ ನೆರವಾಗಿದೆ. 2003–04ರಲ್ಲಿ ದೂರದರ್ಶನದ **ಮೋ... ಮೋ... ಮೋ... ಮೋಜು** ಎಂಬ ಯುವರಂಜನಿ ಕಾರ್ಯಕ್ರಮದಲ್ಲಿ ಭಾಗವಹಿಸಿದವರಿಗೂ ಉಡುಗೊರೆ ನೀಡಿ ಪ್ರೋತ್ಸಾಹಿಸಿದೆ. 2006ರ ಡಿಸೆಂಬರ್‌ನಿಂದ 2007ರ ಮಾರ್ಚ್ ತಿಂಗಳವರೆಗೆ ಬೆಂಗಳೂರು ಆಕಾಶವಾಣಿಯ 'ಎಫ್.ಎಮ್. ರೈನ್‌ಬೋ'ದಲ್ಲಿ **ಪುಸ್ತಕ ಪರಿಚಯ** ಕಾರ್ಯಕ್ರಮವನ್ನು 13 ವಾರಗಳ ಕಾಲ ಪ್ರಾಯೋಜಿಸಿದೆ ಹಾಗೂ ವಿಜೇತರಿಗೆ ಪುಸ್ತಕ ಬಹುಮಾನ ಮತ್ತು ಲೇಖಕರೊಂದಿಗೆ ಸಂವಾದ ಏರ್ಪಡಿಸಿದೆ. ಉದಯ ಟಿವಿಯ **ಕರ್ನಾಟಕ ಮೇರು ಬಾಲ ಪ್ರತಿಭೆ** ಕಾರ್ಯಕ್ರಮದ ವಿಜೇತರಿಗೂ ಪುಸ್ತಕ ಉಡುಗೊರೆ ನೀಡಿ ಪ್ರೋತ್ಸಾಹಿಸಿದೆ.

**ವ್ಯಕ್ತಿ ವಿಕಸನ ಮಾಲೆ**ಯಲ್ಲಿ ಮೊದಲ ಕಂತಿನ 12 ಪುಸ್ತಕಗಳನ್ನು 2004ರಲ್ಲಿ ಹಾಗೂ ಎರಡನೇ ಕಂತಿನ 25 ಪುಸ್ತಕಗಳನ್ನು 2007ರಲ್ಲಿ ಪ್ರಕಟಿಸಲಾಗಿದೆ. 2014ರಲ್ಲಿ ಮೂರನೇ ಕಂತಿನ 17 ಕೃತಿಗಳನ್ನು ಹೊರತರಲಾಗಿದೆ. ಡಾ॥ ಸಿ. ಆರ್. ಚಂದ್ರಶೇಖರ್ ಈ ಮಾಲೆಯ ಸಂಪಾದಕರು.

ಶ್ರೀಮತಿ ನೇಮಿಚಂದ್ರ ಅವರ ಜನಪ್ರಿಯ ಅಂಕಣ **ಬದುಕು ಬದಲಿಸಬಹುದು** 2005ರಲ್ಲಿ ಪ್ರಕಟವಾಯಿತು. ನಂತರದ ವರ್ಷಗಳಲ್ಲಿ ಅದರ ಮುಂದುವರಿದ ಭಾಗಗಳು ಪ್ರಕಟವಾಗಿವೆ.

2006ರಲ್ಲಿ ಮಕ್ಸೀಂ ಗೋರ್ಕಿಯವರ **ತಾಯಿ** ಮತ್ತು ಪ್ರೊ॥ ಎ. ಎನ್. ಮೂರ್ತಿರಾಯರ **ದೇವರು** ಕೃತಿಯ ಇಂಗ್ಲಿಷ್ ಅನುವಾದ **God** – ಮುಂತಾದ ಕೃತಿಗಳು ಪ್ರಕಟವಾಗಿವೆ. ಅದೇ ವರ್ಷ ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಮಾಹಿತಿಗಳನ್ನೊಳಗೊಂಡ ಚಿತ್ರಪಟ (Chart)ಗಳನ್ನು ಪ್ರಕಟಿಸಲಾಯಿತು.

**ನೊಬೆಲ್ ಪುರಸ್ಕೃತರು – ಸಮಗ್ರ ಮಾಹಿತಿ ಕೋಶ** ಎಂಬ ಬೃಹತ್ ಸಂಪುಟವು 2008ರಲ್ಲಿ ಪ್ರಕಟವಾಗಿದೆ. ಶ್ರೀ ಸಿ. ಆರ್. ಕೃಷ್ಣರಾವ್ ಅವರು ರಚಿಸಿರುವ ಈ ಕೃತಿಯ ವಿಸ್ತೃತ/ಪರಿಷ್ಕೃತ ಆವೃತ್ತಿಗಳು ನಂತರ ಪ್ರಕಟಗೊಂಡಿವೆ.

**2009–10 ಹಾಗೂ 2010–11ರಲ್ಲಿ ತನ್ನ ಚಿನ್ನದ ಹಬ್ಬದ ಸಂದರ್ಭದಲ್ಲಿ ನವಕರ್ನಾಟಕ ಪ್ರಕಾಶನ ಹಲವು ಹೊಸ ಯೋಜನೆಗಳನ್ನು ಯಶಸ್ವಿಯಾಗಿ ನೆರವೇರಿಸಿದೆ. ಈ ಸಾಲಿನಲ್ಲಿ ಪ್ರಕಟವಾದ ಎಲ್ಲ ಕೃತಿಗಳೂ 'ಚಿನ್ನದ ಚಿಗುರು' ಎಂಬ ಗುರುತನ್ನು ಹೊಂದಿವೆ.**

ಇವುಗಳಲ್ಲಿ ಪ್ರಮುಖವಾದ ಒಂದು ಯೋಜನೆ **ವನಿತಾ ಚಿಂತನ ಮಾಲೆ**. 2009ರಲ್ಲಿ ಪ್ರಕಟವಾದ ಇದರ ಮೊದಲ ಕಂತಿನ 11 ಪುಸ್ತಕಗಳು ಮಹಿಳೆಯರ ಬವಣೆಯ ಮತ್ತು ಹೋರಾಟದ ಬದುಕಿಗೊಂದು ಬೆಳಕಿಂಡಿಯಾಗಿ ಹೊರಹೊಮ್ಮಿವೆ. ಇದೇ ಮಾಲಿಕೆಯ 2ನೇ ಕಂತಿನಲ್ಲಿ ವಿವಿಧ ಕ್ಷೇತ್ರಗಳಲ್ಲಿ ಮಹಿಳೆಯರ ಸಾಧನೆಗಳನ್ನು ಕುರಿತಾದ ಆರು ಕೃತಿಗಳು 2010ರಲ್ಲಿ ಪ್ರಕಟವಾಗಿವೆ. ನಂತರದ ವರ್ಷಗಳಲ್ಲಿ ಈ ಮಾಲಿಕೆಯಲ್ಲಿ ಹೊಸ ಶೀರ್ಷಿಕೆಗಳು ಹೊರಬಂದಿವೆ.

ಪ್ರೊ॥ ಡಿ. ಆರ್. ಬಳೂರಗಿಯವರ ಪ್ರಧಾನ ಸಂಪಾದಕತ್ವದಲ್ಲಿ ಹಿರಿಯ ಪ್ರಾಥಮಿಕ ಹಾಗೂ ಪ್ರೌಢಶಾಲಾ ಅಧ್ಯಾಪಕರಿಗಾಗಿ **ವಿಜ್ಞಾನ – ಸರಳ ಪರಿಚಯ** ಮಾಲಿಕೆಯ ಕೃತಿಗಳನ್ನು ರಚಿಸಲಾಗಿದೆ. ಇವು ವಿದ್ಯಾರ್ಥಿಗಳಿಗೂ ವಿಜ್ಞಾನಾಸಕ್ತರಿಗೂ ಅತ್ಯುಪಯುಕ್ತ ಕೈಪಿಡಿಗಳು. ಈ ಮಾಲಿಕೆಯ 14 ಪುಸ್ತಕಗಳು 2010ರಲ್ಲಿ ಅನಾವರಣಗೊಂಡಿವೆ. ನಂತರ 6 ಕೃತಿಗಳು 2012ರಲ್ಲೂ 7 ಕೃತಿಗಳು 2014ರಲ್ಲೂ 2 ಕೃತಿಗಳು 2017ರಲ್ಲೂ ಪ್ರಕಟವಾಗಿವೆ.

ನವಕರ್ನಾಟಕ ಪ್ರಕಾಶನದ ಮಹತ್ವಾಕಾಂಕ್ಷೆಯ **ಕರ್ನಾಟಕ ಕಲಾದರ್ಶನ** ಎಂಬ ವಿಶೇಷ ಆಕರ ಗ್ರಂಥವು ಪ್ರೊ॥ ಎಂ. ಎಚ್. ಕೃಷ್ಣಯ್ಯ, ಡಾ॥ ವಿಜಯಾ ಮತ್ತು ಶ್ರೀ ಸಿ. ಆರ್. ಕೃಷ್ಣರಾವ್ ಅವರ ಸಂಪಾದಕತ್ವದಲ್ಲಿ ಪ್ರಕಟವಾಗಿದೆ. ಡಿಮೈ ¼ ಗಾತ್ರದ 1280 ಪುಟಗಳಿರುವ ಈ ಪುಸ್ತಕವನ್ನು ವರ್ಣಚಿತ್ರಗಳ ಸಹಿತ ಆರ್ಟ್ ಕಾಗದದಲ್ಲಿ ಮುದ್ರಿಸಲಾಗಿದೆ. ಸುಮಾರು 4300 ಚಿತ್ರಗಳ ಹಾಗೂ ಉಪಯುಕ್ತ ಮಾಹಿತಿಗಳ ಮೂಲಕ ಕರ್ನಾಟಕದ ಸಮಗ್ರ ಕಲೆಗಳ ಪರಿಚಯ ಮಾಡಿಕೊಡುವ ಈ ಕಲಾಕೋಶವು 2010ರ ಆಗಸ್ಟ್ ತಿಂಗಳಿನಲ್ಲಿ ಸಂಸ್ಥೆಯ ಸುವರ್ಣ ಮಹೋತ್ಸವದ ಸಮಾರಂಭದಲ್ಲಿ ಲೋಕಾರ್ಪಣೆಗೊಂಡಿದೆ. ಈ ಪುಸ್ತಕದ ಜೊತೆ ಅದರ ಸಿ.ಡಿ. ಆವೃತ್ತಿ ಕೂಡ ಪ್ರಕಟವಾಯಿತು.

ಹಿರಿಯ ಪ್ರಾಥಮಿಕ ಶಾಲಾ ವಿದ್ಯಾರ್ಥಿಗಳಿಗಾಗಿ ಬಣ್ಣದ ಚಿತ್ರಗಳುಳ್ಳ **ನವಕರ್ನಾಟಕ ಜ್ಞಾನ–ವಿಜ್ಞಾನ ಮಾಲೆ**ಯ 7 ಪುಸ್ತಕಗಳು 2011ರ ಫೆಬ್ರವರಿ ತಿಂಗಳಲ್ಲಿ ಮೈಸೂರಿನಲ್ಲಿ ಲೋಕಾರ್ಪಣೆಗೊಂಡಿವೆ. ತಜ್ಞ ಲೇಖಕರು ಇವನ್ನು ರಚಿಸಿದ್ದು, ಪ್ರೊ॥ ಅಡ್ಯನಡ್ಕ ಕೃಷ್ಣಭಟ್ ಅವರು ಈ ಮಾಲೆಯ ಸಂಪಾದಕರು.

**ನವಕರ್ನಾಟಕ ವಿಜ್ಞಾನ–ತಂತ್ರಜ್ಞಾನ ಪದಸಂಪದ (ಕನ್ನಡ–ಇಂಗ್ಲಿಷ್–ಕನ್ನಡ)** ಎಂಬ ಬೃಹತ್ ಶಬ್ದಾರ್ಥ ವಿವರಣ ಕೋಶವು ಶ್ರೀ ಕೆ. ಎಲ್. ಗೋಪಾಲಕೃಷ್ಣ ರಾವ್, ಶ್ರೀ ಟಿ. ಆರ್. ಅನಂತರಾಮು ಮತ್ತು ಶ್ರೀ ಸಿ. ಆರ್. ಕೃಷ್ಣರಾವ್ ಅವರ ಸಂಪಾದಕತ್ವದಲ್ಲಿ 2011ರ ಮೇ ತಿಂಗಳಲ್ಲಿ ಪ್ರಕಟವಾಗಿದೆ.

ವಿಶ್ವಕವಿ ರವೀಂದ್ರನಾಥ ಠಾಕೂರರ ಶತಮಾನೋತ್ತರ ಸ್ವರ್ಣ ಜಯಂತಿ ಪ್ರಯುಕ್ತ **ಗುರುದೇವ ಮತ್ತು ಮಹಾತ್ಮ** ಸೇರಿದಂತೆ ನಾಲ್ಕು ಕೃತಿಗಳನ್ನು ಆಗಸ್ಟ್ 2011ರಲ್ಲಿ ಲೋಕಾರ್ಪಣೆ ಮಾಡಲಾಯಿತು.

ಪ್ರೊ॥ ಸಿ. ಎನ್. ಆರ್. ರಾವ್ ಅವರ **Nanoworld** ಮತ್ತು **ನ್ಯಾನೊಪ್ರಪಂಚ** ಕೃತಿಗಳು 2011ರ ಅಕ್ಟೋಬರ್‌ನಲ್ಲಿ ಪ್ರಕಟವಾಗಿವೆ. ಇವು ಬಹಳ ಜನಪ್ರಿಯ ಕೃತಿಗಳು.

ಡಾ॥ ದೇವಿಪ್ರಸಾದ್ ಚಟ್ಟೋಪಾಧ್ಯಾಯ ಅವರ **ಲೋಕಾಯತ** (ಸಂಗ್ರಹಾನುವಾದ : ಡಾ॥ ಜಿ. ರಾಮಕೃಷ್ಣ) 2011ರ ನವೆಂಬರ್ ತಿಂಗಳಲ್ಲಿ ಅನಾವರಣಗೊಂಡಿದೆ.

ಡಿಸೆಂಬರ್ 2011ರಲ್ಲಿ ಡಾ॥ ಎನ್. ಎಸ್. ಲೀಲಾ ಅವರ **ವರ್ಣ ಮಾಯಾಜಾಲ** ಮತ್ತು **Mystery,**

**Magic and Music of Colours** ಕೃತಿಗಳ ಲೋಕಾರ್ಪಣೆಯೊಂದಿಗೆ ನವಕರ್ನಾಟಕ – 50ರ ಸಂಭ್ರಮ (ಚಿನ್ನದ ಹಬ್ಬ)ದ ಯೋಜನೆಗಳು ಯಶಸ್ವಿಯಾಗಿ ಮುಕ್ತಾಯವಾದವು.

ಖ್ಯಾತ ಪತ್ರಕರ್ತ ಕುಲದೀಪ್ ನಯ್ಯರ್ ಅವರ ಆತ್ಮಕಥೆ **ಒಂದು ಜೀವನ ಸಾಲದು !** (ಅನುವಾದ : ಡಾ॥ ಆರ್. ಪೂರ್ಣಿಮಾ) ಸೆಪ್ಟೆಂಬರ್ 2012ರಲ್ಲಿ ಲೋಕಾರ್ಪಣೆಗೊಂಡಿತು. ಈ ಕೃತಿಗೆ ಮೂರು ಪ್ರತಿಷ್ಠಿತ ಅನುವಾದ ಪ್ರಶಸ್ತಿಗಳು ದೊರೆತವು.

ರಾಷ್ಟ್ರೀಯ ಗಣಿತ ವರ್ಷ – 2012ರ ನೆನಪಿಗಾಗಿ ಯೋಜಿಸಲಾದ **ಗಣಿತ ಸಂವತ್ಸರ ಮಾಲೆ**ಯ 8 ಕೃತಿಗಳು 2013ರಲ್ಲಿ ಮತ್ತು 2 ಕೃತಿಗಳು 2014ರಲ್ಲಿ ಹೊರಬಂದಿವೆ.

**ನವಕರ್ನಾಟಕ ಕನ್ನಡ ಕಲಿಕೆ ಮಾಲಿಕೆ**ಯಲ್ಲಿ ಶ್ರೀ ಟಿ. ಎಸ್. ಗೋಪಾಲ್ ಅವರು ರಚಿಸಿರುವ ಹತ್ತು ಕೃತಿಗಳನ್ನು 2013ರ ಜೂನ್ ತಿಂಗಳಲ್ಲಿ ಮೈಸೂರಿನಲ್ಲಿ ಬಿಡುಗಡೆ ಮಾಡಲಾಯಿತು. ನಂತರ ಇನ್ನಷ್ಟು ಹೊಸ ಕೃತಿಗಳು ಈ ಮಾಲಿಕೆಗೆ ಸೇರ್ಪಡೆಯಾದವು.

ಪ್ರೊ॥ ಜಿ. ವೆಂಕಟಸುಬ್ಬಯ್ಯ ಅವರ ನೂರನೇ ವರ್ಷದ ಸಂಭ್ರಮದ ಸಂದರ್ಭದಲ್ಲಿ **ಇಗೋ ಕನ್ನಡ – ಸಂಯುಕ್ತ ಸಂಪುಟ** ಕೃತಿಯನ್ನು 2013 ಜುಲೈ ತಿಂಗಳಲ್ಲಿ ಲೋಕಾರ್ಪಣೆ ಮಾಡಲಾಯಿತು.

ಅಂಧಶ್ರದ್ಧೆಯ ನಿರ್ಮೂಲನೆಗಾಗಿ ಮತ್ತು ವೈಜ್ಞಾನಿಕ ಮನೋವೃತ್ತಿಯನ್ನು ಬೆಳೆಸಿಕೊಳ್ಳುವ ನಿಟ್ಟಿನಲ್ಲಿ ಐದು ವೈಚಾರಿಕ ಪುಸ್ತಕಗಳನ್ನು ಜೂನ್ 2014ರಲ್ಲಿ ಬೆಂಗಳೂರಿನಲ್ಲಿ ಹೊರತರಲಾಯಿತು. ಈ ಕಂತಿನಲ್ಲಿ ಪ್ರಕಟವಾದ ಶ್ರೀ ಎಂ. ಅಬ್ದುಲ್ ರೆಹಮಾನ್ ಪಾಷ ಅವರ **ನಂಬಿಕೆ, ಮೂಢನಂಬಿಕೆ, ವೈಜ್ಞಾನಿಕ ಮನೋವೃತ್ತಿ** ಕೃತಿ ನಾಲ್ಕು ಪ್ರತಿಷ್ಠಿತ ಪ್ರಶಸ್ತಿಗಳಿಗೆ ಪಾತ್ರವಾಗಿದೆ.

ಪ್ರೌಢಶಾಲಾ ವಿದ್ಯಾರ್ಥಿಗಳಿಗಾಗಿ ಹಾಗೂ ಆಸಕ್ತ ಓದುಗರಿಗಾಗಿ **ವಿಶ್ವಮಾನ್ಯರು** ಎಂಬ ಮಾಲಿಕೆಯಲ್ಲಿ ಮೊದಲ ಕಂತಿನ 110 ಶೀರ್ಷಿಕೆಗಳು ಮಾರ್ಚ್ 2015ರಲ್ಲಿ ಲೋಕಾರ್ಪಣೆಗೊಂಡವು. ವಿವಿಧ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿರುವ ವ್ಯಕ್ತಿಗಳ ಬದುಕು–ಸಾಧನೆಗಳ ಕುರಿತು ಜನಪ್ರಿಯ ಶೈಲಿಯ ಕಿರುಹೊತ್ತಿಗೆಗಳಿವು. ನಂತರದ ವರ್ಷಗಳಲ್ಲಿ ಇನ್ನಷ್ಟು ಶೀರ್ಷಿಕೆಗಳು ಈ ಮಾಲಿಕೆಗೆ ಸೇರ್ಪಡೆಯಾಗಿವೆ. ಮಾಲಿಕೆಯ ಸಂಪಾದಕರು ಡಾ॥ ನಾ. ಸೋಮೇಶ್ವರ ಅವರು.

ಡಾ॥ ದೇವಿಪ್ರಸಾದ ಚಟ್ಟೋಪಾಧ್ಯಾಯರ ಪ್ರಧಾನ ಸಂಪಾದಕತ್ವದಲ್ಲಿ ಈ ಹಿಂದೆ ಪ್ರಕಟಿಸಿದ **Global Philosophy for Everyman**ನ ಎಲ್ಲ ಎಂಟು ಸಂಪುಟಗಳನ್ನು ಡಾ॥ ಜಿ. ರಾಮಕೃಷ್ಣ ಅವರ ಸಂಪಾದಕತ್ವದಲ್ಲಿ ವಿವಿಧ ಲೇಖಕರು ಕನ್ನಡಕ್ಕೆ ಅನುವಾದಿಸಿದ್ದಾರೆ. **ಲೋಕ ತತ್ತ್ವಶಾಸ್ತ್ರ ಪ್ರವೇಶಿಕೆ**ಯ ಎಲ್ಲ 8 ಸಂಪುಟಗಳು 2015ರ ಮಾರ್ಚ್ ತಿಂಗಳಲ್ಲಿ ಪ್ರಕಟವಾಗಿವೆ.

ನವಕರ್ನಾಟಕದ ಹೊಸ ಪುಸ್ತಕ ಮಳಿಗೆಯನ್ನು ಬೆಂಗಳೂರಿನ ಕೆಂಪೇಗೌಡ ರಸ್ತೆಯಲ್ಲಿ 2016ರ ಮೇ ತಿಂಗಳಲ್ಲಿ ಆರಂಭಿಸಿದ ಸಂದರ್ಭದಲ್ಲಿ ಡಾ॥ ಜಿ. ರಾಮಕೃಷ್ಣ ಅವರ **ಋಗ್ವೇದ ಪ್ರವೇಶಿಕೆ : ಐತಿಹ್ಯ ಮತ್ತು ವಾಸ್ತವ,** ಇರಾವತಿ ಕರ್ವೆಯವರ ಎರಡು ಕೃತಿಗಳು, ಧರ್ಮಾನಂದ ಕೊಸಾಂಬಿ ಅವರ ಮೂರು ಕೃತಿಗಳು ಸೇರಿದಂತೆ ಒಟ್ಟು 12 ಕೃತಿಗಳ ಲೋಕಾರ್ಪಣೆ ಮಾಡಲಾಯಿತು.

ಡಾ॥ ಎನ್. ಚಿನ್ನಸ್ವಾಮಿ ಸೋಸಲೆ ಅವರ **ಕರ್ನಾಟಕದ ಸಮಗ್ರ ದಲಿತ ಚರಿತ್ರೆ** ಆಗಸ್ಟ್ 2016ರಲ್ಲಿ ಪ್ರಕಟವಾಯಿತು.

ಡಾ॥ ಎ. ಆರ್. ಕೃಷ್ಣಶಾಸ್ತ್ರೀಯವರ **ವಚನ ಭಾರತ** ಮತ್ತು **ಕಥಾಮೃತ** ಕೃತಿಗಳ ಮರುಮುದ್ರಣದ ಹೊಣೆಹೊತ್ತ ನವಕರ್ನಾಟಕ ಈ ಎರಡು ಉತ್ಕೃಷ್ಟ ಕೃತಿಗಳನ್ನು ಏಪ್ರಿಲ್ 2017ರಲ್ಲಿ ಪ್ರಕಟಿಸಿತು.

ಡಾ॥ ಎ. ಓ. ಆವಲಮೂರ್ತಿ ಅವರ **ಪುಟ್ಟ–ಕಿಟ್ಟ ವಿಜ್ಞಾನ ಸಂವಾದ** ಮಾಲೆಯ 8 ಕೃತಿಗಳು 2017 ಜುಲೈ ತಿಂಗಳಲ್ಲಿ ಪ್ರಕಟವಾಗಿದ್ದು ಇನ್ನಷ್ಟು ಕೃತಿಗಳು ನಂತರ ಹೊರಬಂದಿವೆ.

ಡಾ॥ ಟಿ. ಆರ್. ಅನಂತರಾಮು ಅವರ ಸಂಪಾದಕತ್ವದಲ್ಲಿ ರಚಿಸಿದ **ವಿಜ್ಞಾನದ ಹೆದ್ದಾರಿಯಲ್ಲಿ ಮಹಾತಿರುವುಗಳು** ಎಂಬ ಯೋಜನೆ ಸೆಪ್ಟೆಂಬರ್ 2017ರಲ್ಲಿ ಸಾಕಾರಗೊಂಡಿದೆ. ಈ ಕೃತಿಗೆ ಕನ್ನಡ ಸಾಹಿತ್ಯ ಪರಿಷತ್ತು ಮತ್ತು ಭಾರತೀಯ ಪ್ರಕಾಶಕರ ಒಕ್ಕೂಟ ಪ್ರಶಸ್ತಿಗಳನ್ನು ನೀಡಿದೆ.

ಕಾರ್ಲ್ ಮಾರ್ಕ್ಸ್ ಅವರ ಜನ್ಮ ದ್ವಿಶತಾಬ್ದಿ ಹಾಗೂ ಅವರು ರಚಿಸಿದ ಜಗತ್ಪ್ರಸಿದ್ಧ 'ದಾಸ್ ಕ್ಯಾಪಿಟಲ್' ಕೃತಿಯ 150ನೇ ವರ್ಷಾಚರಣೆಯ ಅಂಗವಾಗಿ ನವಕರ್ನಾಟಕ ಮತ್ತು ಕ್ರಿಯಾ ಮಾಧ್ಯಮ ಸಂಸ್ಥೆಗಳು ಜಂಟಿಯಾಗಿ ಹಮ್ಮಿಕೊಂಡ ಪ್ರಕಟಣಾ ಯೋಜನೆ **'ಮಾರ್ಕ್ಸ್ 200 – ಕ್ಯಾಪಿಟಲ್ 150'**. ಈ ಮಾಲಿಕೆಯಲ್ಲಿ ಆರು ಕೃತಿಗಳು 2018ರಲ್ಲೂ ಉಳಿದೆರಡು 2019ರಲ್ಲಿ ಪ್ರಕಟವಾಗಿವೆ.

**2019–20 ನವಕರ್ನಾಟಕದ ಪಾಲಿಗೆ ಒಂದು ಪ್ರಮುಖ ಘಟ್ಟ. ಕರ್ನಾಟಕದ ಸಾಹಿತ್ಯಕ, ಸಾಂಸ್ಕೃತಿಕ, ಬೌದ್ಧಿಕ ಕ್ಷೇತ್ರಕ್ಕೆ ಆರು ದಶಕಗಳ ಸಾರ್ಥಕ ಸೇವೆಯನ್ನು ಪೂರೈಸಿದ ಸಂದರ್ಭ. ಈ ಸವಿ ನೆನಪಿಗಾಗಿ 'ಅಕ್ಷರ ಪಯಣ–೬೦' ವಿಶೇಷ ಮಾಲಿಕೆಯಡಿ ಹಲವು ಮಹತ್ವಪೂರ್ಣ ಕೃತಿಗಳನ್ನು ಪ್ರಕಟಿಸಿದೆ.** (2020ರಲ್ಲಿ ಕೊರೋನಾ ಹಾವಳಿ ಇದ್ದುದರಿಂದ ಹಲವು ಯೋಜನೆಗಳನ್ನು 2021ರಲ್ಲಿ ಪೂರ್ಣಗೊಳಿಸಬೇಕಾಯಿತು.)

**ಅಕ್ಷರ ಪಯಣ–೬೦**ರಲ್ಲಿ ಪ್ರಕಟವಾದ ಪ್ರಮುಖ ಕೃತಿಗಳು : **ಆಕಾಶದಲ್ಲಿ ಏನಿದೆ? ಏಕಿದೆ?** (ಡಾ॥ ಬಿ. ಎಸ್. ಶೈಲಜಾ), **ಯಾವ ಜನ್ಮದ ಮೈತ್ರಿ** (ಚಿರಂಜೀವಿ ಸಿಂಘ್), **ರಸ್ಕಿನ್ ಬಾಂಡ್ ಕತೆಗಳು** (ಅನು : ಡಿ. ಜಿ. ಮಲ್ಲಿಕಾರ್ಜುನ), **ಸ್ವಾತಂತ್ರ್ಯೋತ್ತರ ಭಾರತ** (ಪ್ರೊ॥ ಬಿಪಿನ್‌ಚಂದ್ರ ಮತ್ತಿತರರು; ಅನು : ಡಾ॥ ಸಿ. ಬಿ. ಕಮತಿ), **ಕಾಳಿ ಗಂಗಾ** (ಮಹಾಬಳೇಶ್ವರ ಸೈಲ್; ಅನು: ಗೀತಾ ಶೆಣೈ), **Vedic Mathematics and Science in Vedas** (Dr. S. Balachandra Rao), **ಕನ್ನಡ ಭಾಷೆ–ಬದುಕು** (ಪ್ರೊ॥ ಎಸ್. ಜಿ. ಸಿದ್ಧರಾಮಯ್ಯ), **ಶಾಲೆಗೆ ಬಂದ ಚಿರತೆ ಮತ್ತು ಇತರ ಕಥೆಗಳು** (ಸಂಜಯ್ ಗುಬ್ಬಿ), **ವಿಶ್ವದಲ್ಲಿ ನಾವು ಏಕಾಂಗಿಗಳೇ** (ಡಾ॥ ಎಚ್. ಆರ್. ಕೃಷ್ಣಮೂರ್ತಿ), **ಸಮಗ್ರ ಕರ್ನಾಟಕ ದರ್ಶನ** (ಸಂ: ಡಾ॥ ಎಚ್. ಎಸ್. ಗೋಪಾಲ ರಾವ್, ರಾ. ನಂ. ಚಂದ್ರಶೇಖರ್), **ಮನುಷ್ಯನ ಮಹಾಯಾನ** (ಬಿ. ವಿ. ಕಕ್ಕಿಲ್ಲಾಯ), **ನೂರು ಸಿಂಹಾಸನಗಳು** (ಜಯಮೋಹನ್, ಅನು : ಕೆ. ಪ್ರಭಾಕರನ್). **ಮಾತು ಮಾತಿನ ನಡುವೆ ಭೂಗರ್ಭ ಯಾತ್ರೆ** (ಡಾ॥ ಟಿ. ಆರ್. ಅನಂತರಾಮು), **ಸಂತಸ. ನನ್ನದೆಯ ಹಾಡುಹಕ್ಕಿ** (ನೇಮಿಚಂದ್ರ), **ಚಂದ್ರ ಶೋಧನೆ** (ಸುಮಂಗಲಾ ಎಸ್. ಮುಮ್ಮಿಗಟ್ಟಿ), **ಸ್ವಾತಂತ್ರ್ಯಕ್ಕಾಗಿ ಭಾರತದ ಹೋರಾಟ** (ಪ್ರೊ॥ ಬಿಪಿನ್‌ಚಂದ್ರ ಮತ್ತಿತರರು, ಅನು : ಡಾ॥ ಸಿ. ಬಿ. ಕಮತಿ), **ಕೊರೋನ – ಹೆದರದಿರೋಣ** (ಡಾ॥ ಶ್ರೀನಿವಾಸ ಕಕ್ಕಿಲ್ಲಾಯ, ಡಾ॥ ಬಾಲಸರಸ್ವತಿ ಪಣಂಬೂರು), **ಕಾರಂತರ ಕಾದಂಬರಿಗಳಲ್ಲಿ 'ದುಡಿ'ಮೆ** (ಕೆ. ಸತ್ಯನಾರಾಯಣ), **ನೂರ್‌ಜಹಾನ್** (ಡಾ॥ ವಿಜಯಾ ಸುಬ್ಬರಾಜ್), **ಜಿನ್ನಾರಿಂದ ಮೋದಿವರೆಗೆ** (ಕುಲದೀಪ್ ನಯ್ಯರ್, ಅನು : ಡಾ॥ ಮಹಾಬಲೇಶ್ವರ ರಾವ್), **ವಿವೇಚನೆಯ ಅಂಚಿನೆಡೆಗೆ...** (ಅನಿಲ್ ಅನಂತಸ್ವಾಮಿ, ಅನು : ಡಾ॥ ಉಮಾ ವೆಂಕಟೇಶ್), **ಇಂಕ್ವಿಲಾಬ್ ಜಿಂದಾಬಾದ್!** (ಭಗತ್‌ಸಿಂಗ್, ಅನು : ಎ. ಜ್ಯೋತಿ), **ಕಾವೇರಿ ತೀರದ ಪಯಣ** (ಒ. ಕೆ. ಜೋಣಿ, ಅನು : ವಿಕ್ರಂ ಕಾಂತಿಕೆರೆ), **ಚಿತ್ತಗಾಂಗ್ ವಿಪ್ಲವ ವನಿತೆಯರು** (ಚೈತನ್ಯ ಪಿಂಗಳಿ, ಅನು : ಸ. ರಘುನಾಥ), **ನವಯುಗದ ಚೈತನ್ಯ** (ರವೀಂದ್ರನಾಥ ಠಾಕೂರ್, ಅನು : ಜಿ. ರಾಮನಾಥ ಭಟ್) **ಜಗತ್ತಿನ ಮಹಾನ್ ನಾಗರಿಕತೆಗಳು** (ಲಿಂಗರಾಜು ಡಿ. ಎಸ್.), **ಗರಿ ಬಿಚ್ಚಿ ಗಗನದೆಡೆಗೆ** (ಡೇನಿಯಲ್ ಗ್ರಿನ್‌ಬರ್ಗ್, ಅನು : ನಿವೇದಿತಾ ಎಚ್.), **ಹಾಸುಹೊಕ್ಕು** (ಡಾ॥ ರಹಮತ್ ತರೀಕೆರೆ), **ವಿದ್ಯಾಸಾಗರರ ಮುಗಿಯದ ನಡಿಗೆ** (ಬಿ. ಆರ್. ಮಂಜುನಾಥ್), **ಮಹಾವೃಕ್ಷ** (ಕಂನಾಡಿಗಾ ನಾರಾಯಣ) ಮುಂತಾದವು.

ಅಕ್ಷರ ಪಯಣ–೬೦ರ ಸಂಭ್ರಮದ ಪ್ರಮುಖ ಕೃತಿಯಾಗಿ **ನಮ್ಮ ದೇಹದ ವಿಜ್ಞಾನ** (ಸಂ.: ಡಾ॥ ಟಿ. ಆರ್. ಅನಂತರಾಮು, ಡಾ॥ ನಾ. ಸೋಮೇಶ್ವರ) 2021ರ ಸೆಪ್ಟೆಂಬರ್‌ನಲ್ಲಿ ಲೋಕಾರ್ಪಣೆಗೊಂಡಿತು. ಕ್ರೌನ್ ¼ ಗಾತ್ರದ 568 ಪುಟಗಳ ಈ ಪುಸ್ತಕ ಪೂರ್ತಿ ಬಹುವರ್ಣದಲ್ಲಿ ಆರ್ಟ್ ಕಾಗದದ ಮೇಲೆ ಮುದ್ರಣಗೊಂಡಿದೆ.

2022ರ ಆರಂಭದಲ್ಲೇ ಬೊಳುವಾರು ಮಹಮದ್ ಕುಂಞಿ ಅವರ ಆತ್ಮಕತೆ **ಮೋನು ಸ್ಮೃತಿ** ಪ್ರಕಟ ವಾಗಿದೆ. ಮುಂದಿನ ದಿನಗಳಲ್ಲಿ ಹಲವು ಹೊಸ ಕೃತಿಗಳು ಪ್ರಕಟವಾಗಲಿವೆ. ಮುಖ್ಯವಾಗಿ, ಮಕ್ಕಳ ಸಾಹಿತ್ಯಕ್ಕೆ ಹೆಚ್ಚು ಒತ್ತುಕೊಡಲಾಗುವುದು. ಟಾಟಾ ಟ್ರಸ್ಟ್‌ನವರ ಸಹಯೋಗದೊಂದಿಗೆ 5 ವರ್ಣರಂಜಿನ ಸಚಿತ್ರ ಪುಸ್ತಕ ಗಳನ್ನು ಮಾರ್ಚ್‌ನಲ್ಲಿ ಹೊರತರಲಾಗುವುದು. ಗ್ಯೋಥೆ ಇನ್ಸ್ಟಿಟ್ಯೂಟ್/ ಮ್ಯಾಕ್ಸ್‌ಮುಲ್ಲರ್ ಭವನ್ ಸಹಯೋಗ ದೊಂದಿಗೆ 'ಕಿಂಡರ್ ಕಥಾ' ಯೋಜನೆಯಲ್ಲಿ 20 ಮಕ್ಕಳ ಪುಸ್ತಕಗಳನ್ನು ಈ ವರ್ಷ ಪ್ರಕಟಿಸಲಾಗುವುದು.

**ಪ್ರಗತಿಶೀಲ ಚಳುವಳಿಯೊಂದಿಗೆ ಹೀಗೆ ಹೆಜ್ಜೆ ಹಾಕುತ್ತಿರುವ ನವಕರ್ನಾಟಕ ಪ್ರಕಾಶನಕ್ಕೆ ನಿಮ್ಮ ಬೆಂಬಲ ಸದಾ ಇರಲಿ. ಜನಪರ ಪುಸ್ತಕ ಸಂಸ್ಕೃತಿ ಉಳಿಸಿ; ಬೆಳೆಸಿ.**

# ಪರಿವಿಡಿ

# ನವಕರ್ನಾಟಕ ಪ್ರಕಾಶನ

| ಕ್ರಮ ಸಂಖ್ಯೆ | ಪುಸ್ತಕದ ಶೀರ್ಷಿಕೆ | ಲೇಖಕರು | ಬೆಲೆ ರೂ. |
|---|---|---|---|

## ಪಠ್ಯ ಪುಸ್ತಕಗಳು

| | | | |
|---|---|---|---|
| 1. | ಸಾಹಿತ್ಯ ಸಂಗಮ (ICSE IX, X. 6ನೇ ಮುದ್ರಣ) | *ವಿವಿಧ ಲೇಖಕರು* | **60.00** |
| 2. | ಕನ್ನಡ ಕಿರಣ (ISC) | *ವಿವಿಧ ಲೇಖಕರು* | **95.00** |
| 3. | ಕಾವ್ಯ ಸುಧೆ (ISC) | *ವಿವಿಧ ಲೇಖಕರು* | **45.00** |
| 4. | ಪೆರುವಿನ ಪವಿತ್ರ ಕಣಿವೆಯಲ್ಲಿ – ಆಯ್ದ ಭಾಗಗಳು (ಬೆಂಗಳೂರು ವಿ.ವಿ.) (2ನೇ ಮುದ್ರಣ) | *ನೇಮಿಚಂದ್ರ* | **45.00** |

## ಮಕ್ಕಳ ಪುಸ್ತಕಗಳು

(ಇನ್ನಷ್ಟು ಮಕ್ಕಳ ಪುಸ್ತಕಗಳು 'ವಿಶ್ವಮಾನ್ಯರು' ಮತ್ತು ವಿಜ್ಞಾನ ವಿಭಾಗದಲ್ಲಿವೆ.)

♦ **ಪೂರಕ ಪಠ್ಯ, ಸಾಮಾನ್ಯ ಜ್ಞಾನ**

| | | | |
|---|---|---|---|
| 5. | ಆಡಿ ಕಲಿ : ಪದಗಳ ಆಟ (4ನೇ ಮುದ್ರಣ) | *ಹೆಚ್. ಎಸ್. ರಾಧಾ* | **50.00** |
| 6. | ಕಂದಾ ಅಕ್ಷರ ಕಲಿ (7ನೇ ಮುದ್ರಣ) | *ಬಿ. ಕೆ. ತಿರುಮಲಮ್ಮ* | **65.00** |
| 7. | ಕಂದಾ ಓದುವೆಯಾ. ಭಾಗ–1 (10ನೇ ಮುದ್ರಣ) **(ಕನ್ನಡ ಪುಸ್ತಕ ಪ್ರಾಧಿಕಾರದ 'ಪುಸ್ತಕ ಸೊಗಸು' ಪ್ರಶಸ್ತಿ 1995)** | *ಬಿ. ಕೆ. ತಿರುಮಲಮ್ಮ* *ಚಿತ್ರಗಳು : ಗುಜ್ಜಾರ್* | **40.00** |
| 8. | ಕಂದಾ ಓದುವೆಯಾ. ಭಾಗ–2 (11ನೇ ಮು.) | *ಬಿ. ಕೆ. ತಿರುಮಲಮ್ಮ, ಚಿತ್ರಗಳು : ಗುಜ್ಜಾರ್* | **40.00** |
| 9. | ನಮ್ಮ ಮನೆ (11ನೇ ಮುದ್ರಣ) | *ಬಿ. ಕೆ. ತಿರುಮಲಮ್ಮ, ಚಿತ್ರಗಳು : ಗುಜ್ಜಾರ್* | **35.00** |
| 10. | ಕಿರಿಯರ ಸಚಿತ್ರಕೋಶ (12ನೇ ಮುದ್ರಣ) | *ಚಿತ್ರ–ಪಠ್ಯ : ಗುಜ್ಜಾರ್* | **160.00** |
| 11. | ಆಲ್ ಇನ್ ಒನ್ (ಕನ್ನಡ–ಇಂಗ್ಲಿಷ್–ಹಿಂದಿ. ಪರಿಷ್ಕೃತ) | *ಇನ್ಫಿನಿಟಿ – ನವಕರ್ನಾಟಕ* | **90.00** |

♦ **ನವಕರ್ನಾಟಕ ಪುಟಾಣಿ ಪುಸ್ತಕಗಳು** (ವರ್ಣರಂಜಿತ ಚಿತ್ರಮಾಹಿತಿ ಪುಟಾಣಿ ಪುಸ್ತಕ – 6" X 4¼")

| | | | |
|---|---|---|---|
| 12. | ಅಕ್ಷರಮಾಲೆ (7ನೇ ಮುದ್ರಣ) | *ಚಿತ್ರ–ವಿನ್ಯಾಸ : ನವಕರ್ನಾಟಕ* | **20.00** |
| 13. | ಹಣ್ಣುಗಳು (6ನೇ ಮುದ್ರಣ) | *ಚಿತ್ರಗಳು : ಕೆ. ಪಿ. ಸ್ವಾಮಿ, ಸೂರ್ಯ, ಪಠ್ಯ : ಜೆ. ವೆಂಕಟೇಶ್* | **20.00** |
| 14. | ತರಕಾರಿಗಳು (6ನೇ ಮುದ್ರಣ) | *ಚಿತ್ರಗಳು : ಕೆ. ಪಿ. ಸ್ವಾಮಿ, ಸೂರ್ಯ, ಪಠ್ಯ : ಜೆ. ವೆಂಕಟೇಶ್* | **20.00** |
| 15. | ವಾಹನಗಳು (6ನೇ ಮುದ್ರಣ) | *ವಿನ್ಯಾಸ : ಸೂರ್ಯ, ಪಠ್ಯ : ಸಿ. ಆರ್. ಕೃಷ್ಣರಾವ್* | **20.00** |
| 16. | ಸಾಕು ಪ್ರಾಣಿಗಳು (7ನೇ ಮುದ್ರಣ) | *ಚಿತ್ರ–ವಿನ್ಯಾಸ : ನವಕರ್ನಾಟಕ; ಪಠ್ಯ : ಸಹನ* | **20.00** |
| 17. | ಕಾಡುಪ್ರಾಣಿಗಳು (7ನೇ ಮುದ್ರಣ) | *ಚಿತ್ರಗಳು : ವಿವಿಧ ಮೂಲಗಳಿಂದ, ಪಠ್ಯ : ಕೆ. ಪಿ. ಸ್ವಾಮಿ* | **20.00** |
| 18. | ಸಾಮಾನ್ಯ ಹಕ್ಕಿಗಳು (7ನೇ ಮುದ್ರಣ) | *ಚಿತ್ರಗಳು : ಕ್ಲೆಮೆಂಟ್ ಫ್ರಾನ್ಸಿಸ್, ಪಠ್ಯ : ಕೆ. ಎಸ್. ನವೀನ್* | **20.00** |
| 19. | ಚಿಟ್ಟೆಗಳು (3ನೇ ಮುದ್ರಣ) | *ಚಿತ್ರಗಳು ಮತ್ತು ಪಠ್ಯ : ಡಿ. ಜಿ. ಮಲ್ಲಿಕಾರ್ಜುನ* | **20.00** |
| 20. | ಬಣ್ಣಬಣ್ಣದ ಮೀನುಗಳು (6ನೇ ಮುದ್ರಣ) | *ಚಿತ್ರಗಳು ಮತ್ತು ಪಠ್ಯ : ವೀಕ್ತರ್ ದತ್ಸ್‌ಕೆವಿಚ್* | **20.00** |

21. ಹಾವುಗಳು (7ನೇ ಮುದ್ರಣ) *ಚಿತ್ರಗಳು : ರಾಜ ಪುರೋಹಿತ; ಪಠ್ಯ : ಕೆ. ಎಸ್. ನವೀನ್* **20.00**

22. ಜ್ಞಾನಪೀಠ ಪ್ರಶಸ್ತಿ ಪುರಸ್ಕೃತರು *ಚಿತ್ರಗಳು : ಮಹಾಳಿ, ಕಾಳಿದಾಸ ಎಲ್. ದೈವಜ್ಞ,*
(8ನೇ ಮುದ್ರಣ) *ಪಠ್ಯ : ಕೆ. ಪಿ. ಸ್ವಾಮಿ* **20.00**

### ♦ ಮಕ್ಕಳ ನಾಟಕಗಳು

23. ಮೂರು ಮಕ್ಕಳ ನಾಟಕಗಳು (ಹೂವುಗಳು; ತಿರುಕನ ಕನಸು; ನ್ಯಾಯಕ್ಕೇ ಜಯ)
(5ನೇ ಮುದ್ರಣ) *ಎಸ್. ಮಾಲತಿ* **55.00**

24. ಬುದ್ಧ ಹೇಳಿದ ಕಥೆ (7ನೇ ಮುದ್ರಣ) *ಎಸ್. ಮಾಲತಿ* **60.00**

25. ದಲಿತ ಲೋಕ (2ನೇ ಮುದ್ರಣ) *ಎಸ್. ಮಾಲತಿ* **20.00**

26. ಬೆರಳುಗಳು (3ನೇ ಮುದ್ರಣ) *ಎನ್. ಶ್ರೀನಿವಾಸ ಉಡುಪ* **30.00**

27. ಹಿಡಿಂಬನ ತೋಟ (4ನೇ ಮುದ್ರಣ) *ಎನ್. ಶ್ರೀನಿವಾಸ ಉಡುಪ* **40.00**

### ♦ ಒಗಟುಗಳು

28. ವಿಜ್ಞಾನದ 101 ಒಗಟುಗಳು (12ನೇ ಮುದ್ರಣ) *ವೆಂಕಟೇಶ ಹುಣಶೀಕಟ್ಟಿ* **40.00**

29. ಒಗಟು ಬಿಡಿಸೋ ಜಾಣ (9ನೇ ಮುದ್ರಣ) *ಚಂದ್ರಗೌಡ ಕುಲಕರ್ಣಿ* **30.00**

### ♦ ಮಕ್ಕಳ ಪದ್ಯಗಳು

30. ಚಿವ್ ಚಿವ್ ಗುಬ್ಬಿ (ಶಿಶುಗೀತೆಗಳು. 3ನೇ ಮು.) *ಎಸ್. ಮಂಜುನಾಥ, ಚಿತ್ರಗಳು : ಗುಜ್ಜಾರ್* **70.00**

31. ಗೋಲಗುಮ್ಮಟ (3ನೇ ಮುದ್ರಣ) *ರಾಜಶೇಖರ ಕುಕ್ಕುಂದಾ* **45.00**

32. ಪುಟಾಣಿ ಪದ್ಯಗಳು (4ನೇ ಮುದ್ರಣ) *ಡಾ|| ಪಿ. ನಾರಾಯಣ ಭಟ್* **45.00**

33. ಸಿಂಡ್ರೆಲಾ ಅಂಬ್ರೆಲಾ (5ನೇ ಮುದ್ರಣ) *ಚಿಂತಾಮಣಿ ಕೊಡ್ಲೆಕೆರೆ* **35.00**

34. ಕನ್ನಡ ನಾಡಿನ ಕೂಸುಮರಿ (7ನೇ ಮುದ್ರಣ) *ಎನ್. ಶ್ರೀನಿವಾಸ ಉಡುಪ* **35.00**

35. ಕುಂಭಕರ್ಣನ ನಿದ್ದೆ (7ನೇ ಮುದ್ರಣ) *ಎನ್. ಶ್ರೀನಿವಾಸ ಉಡುಪ* **40.00**
**(ಕನ್ನಡ ಪುಸ್ತಕ ಪ್ರಾಧಿಕಾರದ 'ಪುಸ್ತಕ ಸೊಗಸು ಪ್ರಶಸ್ತಿ' 1996–97)**
**(ಕರ್ನಾಟಕ ಸಾಹಿತ್ಯ ಅಕಾಡೆಮಿಯ 'ಶಿಶುಸಾಹಿತ್ಯ ಬಹುಮಾನ' 1996)**

*ಬರಲಿರುವ ಕೃತಿ*

36. ಪಾಪಚ್ಚಿ ಪದ್ಯಗಳು *ಎನ್. ಶ್ರೀನಿವಾಸ ಉಡುಪ*

### ♦ ಮಕ್ಕಳ ಕಥೆಗಳು ಮತ್ತು ಗದ್ಯ ಸಾಹಿತ್ಯ

37. ಕಥೆಗಳ ತೋರಣ (ಕಥೆ ಓದಿ + ಬಣ್ಣ ತುಂಬಿ) – ಭಾಗ 1 *ಶಾಲಿನಿ ಮೂರ್ತಿ* **140.00**

38. ಕಥೆಗಳ ತೋರಣ (ಕಥೆ ಓದಿ + ಬಣ್ಣ ತುಂಬಿ) – ಭಾಗ 2 *ಶಾಲಿನಿ ಮೂರ್ತಿ* **140.00**

39. ಈಸೋಪನ ಲೋಕನೀತಿ ಕಥೆಗಳು (5ನೇ ಮುದ್ರಣ) *(ಸಂಗ್ರಹ – ರೂಪಾಂತರ : ಆನಂದ)* **225.00**

40. ಬೀರಬಲ್ಲನ ಬುದ್ಧಿವಂತಿಕೆಯ ಕಥೆಗಳು (12ನೇ ಮುದ್ರಣ) *ದು. ನಿಂ. ಬೆಳಗಲಿ* **30.00**

41. ಮುಲ್ಲಾ ನಸ್ರುದ್ದೀನ್ : 38 ಹನಿಗತೆಗಳು (10ನೇ ಮುದ್ರಣ) *ದು. ನಿಂ. ಬೆಳಗಲಿ* **45.00**

42. ಗೋಪಿಯ ಗೊಂಬೆ (4ನೇ ಮುದ್ರಣ) *ನಾ. ಡಿಸೋಜ* **40.00**

43. ಕಾಡಾನೆಯ ಕೊಲೆ (7ನೇ ಮುದ್ರಣ) *ನಾ. ಡಿಸೋಜ* **45.00**

44. ಗೂಬಜ್ಜಿಯ ಗೊರಕೆ (3ನೇ ಮುದ್ರಣ) *ಎನ್. ಶ್ರೀನಿವಾಸ ಉಡುಪ* **65.00**

45. ಆನೆ ಬಂತೊಂದಾನೆ (5ನೇ ಮುದ್ರಣ) *ಕಂನಾಡಿಗಾ ನಾರಾಯಣ* **35.00**

46. ಬಣ್ಣ – ಮಕ್ಕಳಿಗಾಗಿ ಕಥೆಗಳು (2ನೇ ಮುದ್ರಣ) *ಗಣೇಶ ಪಿ. ನಾಡೋರ* **55.00**

47. ಸಾಧನೆ (2ನೇ ಮುದ್ರಣ) *ಗಣೇಶ ಪಿ. ನಾಡೋರ* **95.00**

48. ಹಾರುವ ಬಯಕೆ (2ನೇ ಮುದ್ರಣ) *ಗಣೇಶ ಪಿ. ನಾಡೋರ* **70.00**

49. ಬೆಳ್ಳಕ್ಕಿ ಮತ್ತು ಬುಲ್‌ಬುಲ್ (7ನೇ ಮುದ್ರಣ) *ಗಣೇಶ ಪಿ. ನಾಡೋರ* **65.00**
**(ಕರ್ನಾಟಕ ಸಾಹಿತ್ಯ ಅಕಾಡೆಮಿಯ 'ಮಕ್ಕಳ ಸಾಹಿತ್ಯ ಪ್ರಶಸ್ತಿ' 2003)**

50. ವಿಚಿತ್ರ ಗಿಳಿ (7ನೇ ಮುದ್ರಣ) *ನವಗಿರಿನಂದ* **65.00**

51. ರಾಮನ ಸಾಮರ್ಥ್ಯ (7ನೇ ಮುದ್ರಣ) *ನವಗಿರಿನಂದ* **65.00**

52. ಮಲ್ಲಿಗೆಯ ಮಳೆ (7ನೇ ಮುದ್ರಣ) *ನವಗಿರಿನಂದ* **65.00**

53. ಚೌಕಾಸಿಯ ಪಾಠ (6ನೇ ಮುದ್ರಣ) *ನವಗಿರಿನಂದ* **65.00**

54. ಚಂದಮಾಮನ ಮನೆಗೆ (7ನೇ ಮುದ್ರಣ) *ನವಗಿರಿನಂದ* **65.00**

55. ಕೆಂಡಸಂಪಿಗೆ ಮತ್ತು ಇತರ ಚಿತ್ರಗಳು *ಬಿ. ಎಸ್. ರುಕ್ಕಮ್ಮ* **60.00**

56. ಅಡ್ವೆಂಚರ್ (ಹೊರಾಂಗಣ ಶಿಕ್ಷಣದ ಮಕ್ಕಳ ಕಾದಂಬರಿ. 2ನೇ ಮುದ್ರಣ) *ಬೇದ್ರೆ ಮಂಜುನಾಥ* **95.00**

57. ಮರಿಕುದುರೆಯ ಮೈಸೂರು ಕನಸು (2ನೇ ಮುದ್ರಣ) *ಕ್ಲಿಂಗ್ ಜಾನ್ಸನ್*
*(ಅನು : ಡಾ॥ ಮಹಾಬಲೇಶ್ವರ ರಾವ್)* **110.00**

### ♦ ನವಕರ್ನಾಟಕ ಕಿರಿಯರ ಕಥಾಮಾಲೆ

58. ವಿನೋದ ಕಥೆಗಳು (11ನೇ ಮುದ್ರಣ) ವಿವಿಧ *ಲೇಖಕರು (ಸಂಗ್ರಹ : ವಿ. ರಾಮಚಂದ್ರ ಶಾಸ್ತ್ರಿ)* **70.00**

59. ನೀತಿ ಕಥೆಗಳು (10ನೇ ಮುದ್ರಣ) ವಿವಿಧ *ಲೇಖಕರು (ಸಂಗ್ರಹ : ವಿ. ರಾಮಚಂದ್ರ ಶಾಸ್ತ್ರಿ)* **70.00**

60. ನೀತಿ–ನಡತೆಯ ಕಥೆಗಳು (8ನೇ ಮು.)ವಿವಿಧ *ಲೇಖಕರು (ಸಂಗ್ರಹ : ವಿ. ರಾಮಚಂದ್ರ ಶಾಸ್ತ್ರಿ)* **70.00**

61. ಜಾಣ ಕಥೆಗಳು (10ನೇ ಮುದ್ರಣ) ವಿವಿಧ *ಲೇಖಕರು (ಸಂಗ್ರಹ : ವಿ. ರಾಮಚಂದ್ರ ಶಾಸ್ತ್ರಿ)* **70.00**

62. ಪ್ರಾಣಿ–ಪಕ್ಷಿಗಳ ಕಥೆಗಳು (9ನೇ ಮು.)ವಿವಿಧ *ಲೇಖಕರು (ಸಂಗ್ರಹ : ವಿ. ರಾಮಚಂದ್ರ ಶಾಸ್ತ್ರಿ)* **70.00**

63. ಸಾಹಸ ಕಥೆಗಳು (11ನೇ ಮುದ್ರಣ) *ವಿವಿಧ ಲೇಖಕರು (ಸಂಗ್ರಹ : ಸಹನ)* **70.00**

64. ಕಾಡಿನ ಕಥೆಗಳು (9ನೇ ಮುದ್ರಣ) *ವಿವಿಧ ಲೇಖಕರು (ಸಂಗ್ರಹ : ಸಹನ)* **70.00**

65. ಮನರಂಜನೆಯ ಕಥೆಗಳು (9ನೇ ಮುದ್ರಣ) *ವಿವಿಧ ಲೇಖಕರು (ಸಂಗ್ರಹ : ಸಹನ)* **70.00**

66. ವಿಜ್ಞಾನದ ರಮ್ಯ ಕಥೆಗಳು (8ನೇ ಮುದ್ರಣ) *ವಿವಿಧ ಲೇಖಕರು (ಸಂಗ್ರಹ : ಸಹನ)* **70.00**

67. ದೇಶ–ವಿದೇಶಗಳ ವಿನೋದ ಕಥೆಗಳು (8ನೇ ಮುದ್ರಣ)
*(ಸಂಗ್ರಹ – ರೂಪಾಂತರ : ಶಾಂತಾರಾಮ ಸೋಮಯಾಜಿ)* **70.00**

68. ಚಿಟ್ಟೆ ಹಾಡು ಮತ್ತು ಇರುವೆ ಮದುವೆ (4ನೇ ಮುದ್ರಣ)
*(ಸಂಗ್ರಹ – ರೂಪಾಂತರ : ಶಾಂತಾರಾಮ ಸೋಮಯಾಜಿ)* **70.00**
**(ಕರ್ನಾಟಕ ಬಾಲವಿಕಾಸ ಅಕಾಡೆಮಿಯ 'ಮಕ್ಕಳ ಚಂದಿರ ಪ್ರಶಸ್ತಿ' 2009–10)**

69. ಚೀನಾದ ಚಿಟ್ಟೆ ಕಥೆಗಳು (ಪ್ರಾಚೀನ ಚೀನಾದ ಮಕ್ಕಳ ನೀತಿಕಥೆಗಳು. 4ನೇ ಮುದ್ರಣ)
*(ಸಂಗ್ರಹ – ರೂಪಾಂತರ : ಬೇದ್ರೆ ಮಂಜುನಾಥ)* **70.00**

*ಬರಲಿರುವ ಕೃತಿ*

70. ಪುಟಾಣಿ ಕಥೆಗಳು *ಪ. ರಾಮಕೃಷ್ಣ ಶಾಸ್ತ್ರಿ*

### ♦ ಮಕ್ಕಳ ಜನಪದ ಕಥಾಮಾಲೆ

71. ಬಾಯಿ ಇದ್ದವರು ಬರದಲ್ಲೂ ಬದುಕುತ್ತಾರೆ (ಮಧ್ಯಕಾಲೀನ ಭಾರತದ ಜನಪದ ಕಥೆಗಳು. 4ನೇ ಮುದ್ರಣ) *(ಸಂಗ್ರಹ – ರೂಪಾಂತರ : ಬಿ. ಎಸ್. ರುಕ್ಕಮ್ಮ, ಎಸ್. ಆರ್. ರಂಗಮಣಿ)* **70.00**

72. ಅಧಿಕಾರದ ಕುರುಡು (ಮಧ್ಯಕಾಲೀನ ಭಾರತದ ಜನಪದ ಕಥೆಗಳು. 4ನೇ ಮುದ್ರಣ)
*(ಸಂಗ್ರಹ – ರೂಪಾಂತರ : ಬಿ. ಎಸ್. ರುಕ್ಕಮ್ಮ, ಎಸ್. ಆರ್. ರಂಗಮಣಿ)* **70.00**

73. ಸರ್ವರಿಗೂ ಸಮಪಾಲು (ರಷ್ಯಾದ ನೆರೆಹೊರೆಯ ಜನಪದ ಕಥೆಗಳು. 5ನೇ ಮುದ್ರಣ)
*(ಸಂಗ್ರಹ – ರೂಪಾಂತರ : ಬೇದ್ರೆ ಮಂಜುನಾಥ)* **65.00**

74. ಕಥೆ ಹೇಳುವ ಸಮಯ (ಪೌರ್ವಾತ್ಯ ಮತ್ತು ಪಾಶ್ಚಾತ್ಯ ದೇಶಗಳ ಮಕ್ಕಳ ಜನಪದ ಕಥೆಗಳು. 6ನೇ ಮುದ್ರಣ) *(ಸಂಗ್ರಹ – ರೂಪಾಂತರ : ಬೇದ್ರೆ ಮಂಜುನಾಥ)* **65.00**

75. ಕೊಂಫಕ್ ಕೊಮಾರ್ – ನಾಲ್ಕು ಪಾದದ ಡಾಕ್ಟರ್ (ಪೌರ್ವಾತ್ಯ ಮತ್ತು ಪಾಶ್ಚಾತ್ಯ ದೇಶಗಳ ಮಕ್ಕಳ ಜನಪದ ಕಥೆಗಳು. 2ನೇ ಮುದ್ರಣ) *(ಸಂಗ್ರಹ – ರೂಪಾಂತರ : ಬೇದ್ರೆ ಮಂಜುನಾಥ)* **70.00**

♦ **ವರ್ಣರಂಜಿತ ಚಿತ್ರಕಥೆಗಳು**

ಬರಲಿರುವ ಕೃತಿಗಳು

76. ಜಮ್ಲೊ ಹೆಜ್ಜೆ ಹಾಕುತ್ತಾಳೆ *ಸಮೀನಾ ಮಿಶ್ರಾ, ಚಿತ್ರಗಳು : ತಾರೀಖ್ ಅಜ಼ೀಜ಼್ (ಅನು : ಬೇದ್ರೆ ಮಂಜುನಾಥ)*
77. ನಂ ತಪ್ಪಲ್ಲ *ಎನ್. ಶ್ರೀನಿವಾಸ ಉಡುಪ, ಚಿತ್ರಗಳು : ರುಚಿ ಮ್ಹಸಾಣೆ*
78. ಕೆಂಪು ರಿಬ್ಬನಿನ ಗೂಡು *ನೀಲಾಂಬರಿ, ಚಿತ್ರಗಳು : ಕವಿತಾ ಸಿಂಗ್*
79. ಅಂಬುಗ ಎಂಬ ಹಕ್ಕಿ *ನಾ. ಡಿಸೋಜ, ಚಿತ್ರಗಳು : ಉಮಾ ಕೃಷ್ಣಸ್ವಾಮಿ*
80. ಕೊಡೆ ಅಂಕಲ್ *ಆನಂದ್ ಪಾಟೀಲ, ಚಿತ್ರಗಳು : ಅಶೋಕ್ ರಾಜಗೋಪಾಲನ್*
81. ಪುಟ್ಟಿಯೂ ಹಾರುತ್ತಿದ್ದಳು *ತಮ್ಮಣ್ಣ ಬೀಗಾರ, ಚಿತ್ರಗಳು : ನ್ಯಾನ್ಸಿ ರಾಜ್*

♦ **ಇನ್ಫಿನಿಟಿ – ನವಕರ್ನಾಟಕ ಪಂಚತಂತ್ರದ ಕಥೆಗಳು** (ವರ್ಣರಂಜಿತ ಸಚಿತ್ರ ಪುಸ್ತಕಗಳು. ಪ್ರತಿಯೊಂದರಲ್ಲೂ ತಲಾ 2 ಕಥೆಗಳು. ಪುಸ್ತಕದ ಗಾತ್ರ : 8½" X 11")

82. ಮದುಮಗನಾದ ಹಾವು ಮತ್ತು ಕತ್ತೆಯ ಸಂಗೀತ (2ನೇ ಮುದ್ರಣ) **60.00**
83. ಆನೆ ಕಲಿಸಿದ ಪಾಠ ಮತ್ತು ಇಲಿಗಳ ತಾತ್ಸಾರ (2ನೇ ಮುದ್ರಣ) **60.00**
84. ಇಲಿಗಳ ಮೂರ್ಖತನ ಮತ್ತು ಆನೆಗೆ ಬುದ್ಧಿ ಕಲಿಸಿದ ಜೇನುನೊಣ (2ನೇ ಮುದ್ರಣ) **60.00**
85. ಸ್ನೇಹಿತರೆಂದರೆ ಹೀಗಿರಬೇಕು ಮತ್ತು ಕೋತಿಯ ಹೃದಯ ಮರದ ಮೇಲೆ (2ನೇ ಮು.) **60.00**
86. ಸುಳ್ಳಿಗೆ ತಕ್ಕ ಶಾಸ್ತಿ ಮತ್ತು ಜಾಣ ಮೊಲ (2ನೇ ಮುದ್ರಣ) **60.00**

## ವಿಶ್ವಮಾನ್ಯರು

(ಸಂಪಾದಕರು : ಡಾ॥ ನಾ. ಸೋಮೇಶ್ವರ)

87. ರಾಷ್ಟ್ರಕವಿ – ಕುವೆಂಪು (6ನೇ ಮುದ್ರಣ) *ಟಿ. ಎಸ್. ಗೋಪಾಲ್* **35.00**
88. ಸಾಧನಕೇರಿಯ ಸಾಧಕ – ದ. ರಾ. ಬೇಂದ್ರೆ (6ನೇ ಮುದ್ರಣ) *ಟಿ. ಎಸ್. ಗೋಪಾಲ್* **35.00**
89. ಕಡಲ ತಡಿಯ ಭಾರ್ಗವ – ಶಿವರಾಮ ಕಾರಂತ (6ನೇ ಮು.) *ಟಿ. ಎಸ್. ಗೋಪಾಲ್* **35.00**
90. ಕನ್ನಡದ ಆಸ್ತಿ – ಮಾಸ್ತಿ ವೆಂಕಟೇಶ ಅಯ್ಯಂಗಾರ್ (5ನೇ ಮು.) *ಟಿ. ಎಸ್. ಗೋಪಾಲ್* **35.00**
91. ಜ್ಞಾನಪೀಠ ಪ್ರಶಸ್ತಿ ವಿಜೇತ – ವಿ. ಕೃ. ಗೋಕಾಕ (5ನೇ ಮು.) *ಟಿ. ಎಸ್. ಗೋಪಾಲ್* **35.00**
92. ಕನ್ನಡ 'ಸುರಗಿ'ಯ ಘಮ – ಯು. ಆರ್. ಅನಂತಮೂರ್ತಿ (3ನೇ ಮುದ್ರಣ) *ಟಿ. ಎಸ್. ಗೋಪಾಲ್* **35.00**
93. ಪರಂಪರೆಯ ನವಕುಸುಮ – ಗಿರೀಶ ಕಾರ್ನಾಡ (3ನೇ ಮು.) *ಟಿ. ಎಸ್. ಗೋಪಾಲ್* **35.00**
94. ದೇಸೀ 'ಶಿಖರಸೂರ್ಯ' – ಚಂದ್ರಶೇಖರ ಕಂಬಾರ (3ನೇ ಮು.) *ಟಿ. ಎಸ್. ಗೋಪಾಲ್* **35.00**
95. ಕನ್ನಡದ ಪ್ರಥಮ ರಾಷ್ಟ್ರಕವಿ – ಎಂ. ಗೋವಿಂದ ಪೈ (3ನೇ ಮು.) *ಟಿ. ಎಸ್. ಗೋಪಾಲ್* **30.00**

| | | |
|---|---|---|
| 96. ಹೊಸಗನ್ನಡ  ಶಿಕ್ಷಣ ಪ್ರವರ್ತಕ – ಪಂಜೆ ಮಂಗೇಶ ರಾವ್ (2ನೇ ಮುದ್ರಣ) | *ಟಿ. ಎಸ್. ಗೋಪಾಲ್* | **30.00** |
| 97. ಹೊಸಗನ್ನಡದ ಆಚಾರ್ಯ – ಟಿ. ಎಸ್. ವೆಂಕಣ್ಣಯ್ಯ (3ನೇ ಮು.) | *ಟಿ. ಎಸ್. ಗೋಪಾಲ್* | **30.00** |
| 98. ಕನ್ನಡಕ್ಕೊಬ್ಬನೇ – ಟಿ. ಪಿ. ಕೈಲಾಸಂ (3ನೇ ಮುದ್ರಣ) | *ಟಿ. ಎಸ್. ಗೋಪಾಲ್* | **30.00** |
| 99. ಕನ್ನಡದ ರತ್ನ – ಜಿ. ಪಿ. ರಾಜರತ್ನಂ (4ನೇ ಮುದ್ರಣ) | *ಟಿ. ಎಸ್. ಗೋಪಾಲ್* | **30.00** |
| 100. ಹಾಸ್ಯಯೋಗಿ – ಗೊರೂರು ರಾಮಸ್ವಾಮಿ ಅಯ್ಯಂಗಾರ್ (3ನೇ ಮುದ್ರಣ) | *ಟಿ. ಎಸ್. ಗೋಪಾಲ್* | **30.00** |
| 101. ನವೋದಯ ಆಚಾರ್ಯ – ಬಿ. ಎಂ. ಶ್ರೀಕಂಠಯ್ಯ | *ಟಿ. ಎಸ್. ಗೋಪಾಲ್* | **30.00** |
| 102. ಕನ್ನಡ ಸಾಹಿತ್ಯದ ಅಶ್ವತ್ಥ ವೃಕ್ಷ – ಡಿ. ವಿ. ಗುಂಡಪ್ಪ (2ನೇ ಮು.) | *ಟಿ. ಎಸ್. ಗೋಪಾಲ್* | **35.00** |
| 103. ಕನ್ನಡ ಕುಲಸಾರಥಿ – ಎ. ಆರ್. ಕೃಷ್ಣಶಾಸ್ತ್ರೀ | *ಟಿ. ಎಸ್. ಗೋಪಾಲ್* | **30.00** |
| 104. ಕನ್ನಡ ಶಬ್ದಾರ್ಥಲೋಕದ ದಾರಿದೀವಿಗೆ – ಜಿ. ವೆಂಕಟಸುಬ್ಬಯ್ಯ | *ಟಿ. ಎಸ್. ಗೋಪಾಲ್* | **30.00** |
| 105. ಬಯಲುಸೀಮೆಯ ಹಾಡುಹಕ್ಕಿ – ಬೆಳಗೆರೆ ಜಾನಕಮ್ಮ | *ನೇಮಿಚಂದ್ರ* | **30.00** |
| 106. ಸಣ್ಣ ಕಥೆಗಳ ಆದ್ಯ ಲೇಖಕಿ – ಕೊಡಗಿನ ಗೌರಮ್ಮ (3ನೇ ಮುದ್ರಣ) | *ಡಾ॥ ವಸುಂಧರಾ ಭೂಪತಿ* | **30.00** |
| 107. ಕಾದಂಬರಿ  ಸಾರ್ವಭೌಮ – ಅ. ನ. ಕೃಷ್ಣರಾಯ (3ನೇ ಮು.) | *ಡಾ॥ ಪಿ. ಸಂಗೀತ* | **30.00** |
| 108. ಪ್ರಗತಿಶೀಲ ಕಾದಂಬರಿಕಾರ – ಬಸವರಾಜ ಕಟ್ಟೀಮನಿ | *ಮ. ಶ್ರೀ. ಮುರಳಿ ಕೃಷ್ಣ* | **30.00** |
| 109. ಛಾಯಾಚಿತ್ರ ಕಲಾವಿದ, ಪ್ರಬುದ್ಧ ಲೇಖಕ – ಡಾ॥ ಕೃಷ್ಣಾನಂದ ಕಾಮತ್ | *ಡಾ॥ ಗೀತಾ ಶೆಣೈ* | **30.00** |
| 110. ಐಕ್ಯಗಾನದ ತಪಸ್ವಿ – ಕಯ್ಯಾರ ಕಿಞ್ಞಣ್ಣ ರೈ (3ನೇ ಮುದ್ರಣ) | *ಡಾ॥ ಪಾರ್ವತಿ ಜಿ. ಐತಾಳ್* | **30.00** |
| 111. ತಿರುಕ್ಕುರಳ್ ಕರ್ತೃ – ತಿರುವಳ್ಳುವರ್ | *ಪರಂಜ್ಯೋತಿ* | **30.00** |
| 112. ಮಹಾಕವಿ – ಸುಬ್ರಮಣ್ಯ ಭಾರತಿ (2ನೇ ಮುದ್ರಣ) | *ಪರಂಜ್ಯೋತಿ* | **25.00** |
| 113. ಬದ್ಧತೆಯ ಬರಹಗಾರ – ಭೀಷ್ಮ ಸಾಹನಿ | *ಎಸ್. ಮಾಲತಿ* | **30.00** |
| 114. ನಾಡಿನ ಹಾಡು – ರವೀಂದ್ರನಾಥ ಠಾಕೂರ್ (2ನೇ ಮುದ್ರಣ) | *ಜ. ನಾ. ತೇಜಶ್ರೀ* | **35.00** |
| 115. ಮಹರ್ಷಿ – ಲಿಯೋ ಟಾಲ್‌ಸ್ಟಾಯ್ (2ನೇ ಮುದ್ರಣ) | *ಜ. ನಾ. ತೇಜಶ್ರೀ* | **35.00** |
| 116. ನಾಟಕಲೋಕದ ಸಾಮ್ರಾಟ – ವಿಲಿಯಂ  ಶೇಕ್ಸ್‌ಪಿಯರ್ (4ನೇ ಮುದ್ರಣ) | *ಡಾ॥ ಪಾರ್ವತಿ ಜಿ. ಐತಾಳ್* | **35.00** |
| 117. ಕ್ರಾಂತಿಕಾರಿ, ವಿಶ್ವಕವಿ – ಪಾಬ್ಲೊ ನೆರೂಡ (2ನೇ ಮುದ್ರಣ) | *ಎಂ. ಜೆ.  ರಾಜೀವ ಗೌಡ* | **25.00** |
| 118. ವಾಗ್ಗೇಯಕಾರ – ಮೈಸೂರು ವಾಸುದೇವಾಚಾರ್ಯ | *ಟಿ. ಎಸ್. ಗೋಪಾಲ್* | **30.00** |
| 119. ಸ್ವರಾಧಿರಾಜ, ಭಾರತರತ್ನ  – ಪಂಡಿತ್ ಭೀಮಸೇನ ಜೋಶಿ (3ನೇ ಮುದ್ರಣ) | *ಬಾ. ಹ. ಉಪೇಂದ್ರ* | **30.00** |
| 120. ಸಂಗೀತ ಸಾಮ್ರಾಜ್ಞೆ – ಡಾ॥ ಗಂಗೂಬಾಯಿ ಹಾನಗಲ್ಲ | *ಡಾ॥ ಸಂತೋಷ ಹಾನಗಲ್ಲ* | **30.00** |
| 121. ಸಂಗೀತ ಕಲಾನಿಧಿ – ಎಂ. ಎಸ್. ಸುಬ್ಬುಲಕ್ಷ್ಮಿ (3ನೇ ಮುದ್ರಣ) | *ಪರಂಜ್ಯೋತಿ* | **30.00** |
| 122. ಸಂಗೀತ ಜ್ಞಾನಿ – ಇಳಯರಾಜಾ (2ನೇ ಮುದ್ರಣ) | *ಪರಂಜ್ಯೋತಿ* | **25.00** |
| 123. ಬಹುಮುಖ ಪ್ರತಿಭೆಯ – ಸತ್ಯಜಿತ್ ರೇ | *ಮ. ಶ್ರೀ. ಮುರಳಿ ಕೃಷ್ಣ* | **30.00** |
| 124. ಬದ್ಧತೆಯ ಕಲಾವಿದ – ಬಲರಾಜ್ ಸಾಹನಿ | *ಎಸ್. ಮಾಲತಿ* | **30.00** |
| 125. ನಟಸಾರ್ವಭೌಮ – ಡಾ॥ ರಾಜ್‌ಕುಮಾರ್ (4ನೇ ಮು.) | *ಕೆ. ಎಚ್. ನರಸಿಂಹಮೂರ್ತಿ* | **30.00** |

| | | |
|---|---|---|
| 126. ರಂಗಭೂಮಿಯ ಮೇಷ್ಟ್ರು – ಬಿ. ವಿ. ಕಾರಂತ (3ನೇ ಮುದ್ರಣ) | *ರುದ್ರೇಶ್ ಬಿ. ಅದರಂಗಿ* | **30.00** |
| 127. ನಾಟಕ ರತ್ನ – ಗುಬ್ಬಿ ವೀರಣ್ಣ (3ನೇ ಮುದ್ರಣ) | *ಕೆ. ಎನ್. ಭಗವಾನ್* | **30.00** |
| 128. ಅಭಿಜಾತ ಛಾಯಾಚಿತ್ರ ಕಲಾಕಾರ – ವಿ. ಕೆ. ಮೂರ್ತಿ (2ನೇ ಮು.) | *ಕೆ. ಎನ್. ಭಗವಾನ್* | **25.00** |
| 129. ನವಭಾರತ ಶಿಲ್ಪಿ – ಸರ್ ಎಂ. ವಿಶ್ವೇಶ್ವರಯ್ಯ (4ನೇ ಮುದ್ರಣ) | *ಡಾ॥ ಇಂದಿರಾ ಹೆಗ್ಗಡೆ* | **35.00** |
| 130. ಭಾರತರತ್ನ – ಡಾ॥ ಎ. ಪಿ. ಜೆ. ಅಬ್ದುಲ್ ಕಲಾಮ್ (6ನೇ ಮುದ್ರಣ) | *ಅಸ್ಮಾ ಅನ್ಸಾರಿ* | **35.00** |
| 131. ಶಿಕ್ಷಣ ರಂಗದ ಪ್ರತಿಭೆ, ವಿಚಾರವಾದಿ ಚಿಂತಕ – ಡಾ॥ ಎಚ್. ನರಸಿಂಹಯ್ಯ (3ನೇ ಮುದ್ರಣ) | *ಎಂ. ಕೆ. ಗೋಪಿನಾಥ್* | **30.00** |
| 132. ಮಹಾತ್ಮ – ಜ್ಯೋತಿ ಬಾ ಫುಲೆ (2ನೇ ಮುದ್ರಣ) | *ಡಾ॥ ಮಹಾಬಲೇಶ್ವರ ರಾವ್* | **30.00** |
| 133. ವಿದ್ಯಾಜ್ಯೋತಿ – ಸಾವಿತ್ರಿಬಾಯಿ ಫುಲೆ (6ನೇ ಮುದ್ರಣ) | *ಡಾ॥ ಗೀತಾ ಶೆಣೈ* | **35.00** |
| 134. 'ಮಕ್ಕಳ ಕೂಟ'ದ – ಆರ್. ಕಲ್ಯಾಣಮ್ಮ (2ನೇ ಮುದ್ರಣ) | *ಡಾ॥ ಗೀತಾ ಶೆಣೈ* | **25.00** |
| 135. ಹಸ್ತಕಲೆಗಳ ಮಾತೆ – ಕಮಲಾದೇವಿ ಚಟ್ಟೋಪಾಧ್ಯಾಯ (2ನೇ ಮು.) | *ಡಾ॥ ಗೀತಾ ಶೆಣೈ* | **25.00** |
| 136. ಅಭಿಜಾತ ನೃತ್ಯ ಕಲಾವಿದೆ – ಮೃಣಾಲಿನಿ ಸಾರಾಭಾಯಿ (2ನೇ ಮು.) | *ಡಾ॥ ಗೀತಾ ಶೆಣೈ* | **25.00** |
| 137. ಭಾರತದ ಪ್ರಥಮ ಮಾನವಶಾಸ್ತ್ರಜ್ಞೆ – ಇರಾವತಿ ಕರ್ವೆ | *ಡಾ॥ ಗೀತಾ ಶೆಣೈ* | **30.00** |
| 138. ಮಹಾಪಂಡಿತ – ರಾಹುಲ ಸಾಂಕೃತ್ಯಾಯನ (2ನೇ ಮುದ್ರಣ) | *ಡಾ॥ ಗೀತಾ ಶೆಣೈ* | **25.00** |
| 139. ಬಹುಶ್ರುತ ವಿದ್ವಾಂಸ – ಧರ್ಮಾನಂದ ಕೊಸಾಂಬಿ (2ನೇ ಮುದ್ರಣ) | *ಡಾ॥ ಗೀತಾ ಶೆಣೈ* | **25.00** |
| 140. ವೈಚಾರಿಕ ಜಗತ್ತಿನ ಧ್ರುವತಾರೆ – ದೇವಿಪ್ರಸಾದ್ ಚಟ್ಟೋಪಾಧ್ಯಾಯ | *ಡಾ॥ ಎನ್. ಗಾಯತ್ರಿ* | **30.00** |
| 141. ಕನ್ನಡದ ಕೀರ್ತಿಕಳಶ – ರೆವರೆಂಡ್ ಫರ್ಡಿನೆಂಡ್ ಕಿಟೆಲ್ (3ನೇ ಮು.) | *ಸಿ. ಮರಿಜೋಸೆಫ್* | **30.00** |
| 142. ಕರ್ನಾಟಕ ಏಕೀಕರಣದ ರೂವಾರಿ – ಆಲೂರು ವೆಂಕಟರಾಯ (3ನೇ ಮುದ್ರಣ) | *ಕೆ. ಎಚ್. ನರಸಿಂಹಮೂರ್ತಿ* | **30.00** |
| 143. ದೇವರಿಲ್ಲದ ಧಮ್ಮ ಕೊಟ್ಟ – ಗೌತಮ ಬುದ್ಧ (2ನೇ ಮು.) | *ಎಂ. ಅಬ್ದುಲ್ ರೆಹಮಾನ್ ಪಾಷ* | **35.00** |
| 144. ಸಾಮಾಜಿಕ ಕ್ರಾಂತಿಕಾರಿ – ಜೀಸಸ್ ಕ್ರೈಸ್ತ್ | *ಎಂ. ಅಬ್ದುಲ್ ರೆಹಮಾನ್ ಪಾಷ* | **30.00** |
| 145. ಇಸ್ಲಾಂ ಪ್ರವರ್ತಕ – ಪ್ರವಾದಿ ಮುಹಮ್ಮದ್ (3ನೇ ಮುದ್ರಣ) | *ಎಂ. ಅಬ್ದುಲ್ ರೆಹಮಾನ್ ಪಾಷ* | **30.00** |
| 146. ಕ್ರಾಂತಿಕಾರಿ, ಸಮಾಜೋದ್ಧಾರಕ – ಬಸವಣ್ಣ (2ನೇ ಮುದ್ರಣ) | *ಸೂರ್ಯಕಾಂತ ಸೊನ್ನದ* | **30.00** |
| 147. ಸಾರ್ಥಕತೆಯ ಸಾಧಕ – ಸರ್ವಜ್ಞ (2ನೇ ಮುದ್ರಣ) | *ಜ. ಹೊ. ನಾರಾಯಣಸ್ವಾಮಿ* | **35.00** |
| 148. ಅರಿವಿನ ಹರಿಕಾರ – ಕನಕದಾಸ (5ನೇ ಮುದ್ರಣ) | *ಜ. ಹೊ. ನಾರಾಯಣಸ್ವಾಮಿ* | **35.00** |
| 149. ಆರ್ಯಸಮಾಜದ ಸ್ಥಾಪಕ – ದಯಾನಂದ ಸರಸ್ವತಿ | *ನೇಮಿಚಂದ್ರ* | **30.00** |
| 150. ವಿಶ್ವಶಕ್ತಿ – ವಿವೇಕಾನಂದ (5ನೇ ಮುದ್ರಣ) | *ಡಿ. ಎಸ್. ಶ್ರೀನಿವಾಸ ಪ್ರಸಾದ್* | **35.00** |
| 151. ಸಮಾಜ ಸುಧಾರಕ – ಶ್ರೀ ನಾರಾಯಣ ಗುರು (4ನೇ ಮುದ್ರಣ) | *ಡಾ॥ ಪಾರ್ವತಿ ಜಿ . ಐತಾಳ್* | **35.00** |
| 152. ದಕ್ಷಿಣಪೂರ್ವ ಏಷ್ಯದ ಸಾಕ್ರಟಿಸ್ – ಪೆರಿಯಾರ್ (3ನೇ ಮುದ್ರಣ) | *ಪರಂಜ್ಯೋತಿ* | **30.00** |
| 153. ಮಾನವತಾವಾದಿ, ನಾಸ್ತಿಕ – ಗೋರಾ (2ನೇ ಮುದ್ರಣ) | *ಹೆಚ್. ಜಿ. ವಿಜಯಕುಮಾರ್* | **25.00** |
| 154. ದೀನಬಂಧು – ಮದರ್ ತೆರೆಸಾ (5ನೇ ಮುದ್ರಣ) | *ಡಾ॥ ಗೀತಾ ಶೆಣೈ* | **35.00** |
| 155. ಅಭಯ ಸಾಧಕ – ಬಾಬಾ ಆಮಟೆ (2ನೇ ಮುದ್ರಣ) | *ಎನ್. ಎಲ್. ಆನಂದ್* | **25.00** |
| 156. ನಿಸ್ವಾರ್ಥ ಸೇವೆಯ ಹಾದಿಯಲ್ಲಿ – ಡಾ॥ ಈಡಾ ಸ್ಕಡರ್ (2ನೇ ಮು.) | *ನೇಮಿಚಂದ್ರ* | **25.00** |
| 157. ಕರ್ನಾಟಕ ಸಿಂಹಾಸನಾಧೀಶ್ವರ – ಕೃಷ್ಣದೇವರಾಯ (3ನೇ ಮು.) | *ಕೆ. ಎನ್. ಭಗವಾನ್* | **30.00** |
| 158. ಬೆಂಗಳೂರು ನಗರ ನಿರ್ಮಾಪಕ – ಕೆಂಪೇಗೌಡ (3ನೇ ಮುದ್ರಣ) | *ಡಿ. ಸ್ಮಿತಾ ರೆಡ್ಡಿ* | **30.00** |

